

ಭೀಮಲಿಂಗೇಶ್ವರಸ್ವಾಮಿ – ಕೈವಾರ

ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು
ಆಚಾರವೆಂಬ ಕಾಯಾಗಿತ್ತು ನಿಷ್ಪತ್ತಿಯೆಂಬ ಹಣ್ಣಾಯಿತ್ತು
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

—ಶ್ರೀ ಬಸವಣ್ಣ

(ಬಸವಜಯಂತಿ ಪ್ರಯುಕ್ತ)

ಸಂದರ್ಶಿಸಿ ಅನುಗ್ರಹೀತರಾಗಿರಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ. ತಿರುಪತಿ

## ಬ್ರಹ್ಮೋತ್ಸವಗಳು

### ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 3–6–84 | ಭಾನು | — | ಅಂಕುರಾರ್ಪಣೆ |
| 4–6–84 | ಸೋಮ | ಧ್ವಜಾರೋಹಣ | ದೊಡ್ಡಶೇಷವಾಹನ |
| 5–6–84 | ಮಂಗಳ | ಚಿಕ್ಕ ಶೇಷವಾಹನ | ಹಂಸವಾಹನ |
| 6–6–84 | ಬುಧ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 7–6–84 | ಗುರು | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 8–6–84 | ಶುಕ್ರ | ಮೋಹಿನೀ ಅವತಾರ | **ಗರುಡವಾಹನ** |
| 9–6–84 | ಶನಿ | ಹನುಮದ್ವಾಹನ, ಸಂಜೆ ವಸಂತೋತ್ಸವ | ಗಜವಾಹನ |
| 10–6–84 | ಭಾನು | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 11–6–84 | ಸೋಮ | **ರಥೋತ್ಸವ** | ಅಶ್ವವಾಹನ |
| 12–6–84 | ಮಂಗಳ | ಅವಭೃತ, ಚಕ್ರಸ್ನಾನ | ಧ್ವಜಾವರೋಹಣ |

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.

---

ಸಂದರ್ಶಿಸಿ ! ಅನುಗ್ರಹೀತರಾಗಿರಿ ! !

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು

## ವಾರ್ಷಿಕ ಪ್ಲವೋತ್ಸವ ಕಾರ್ಯಕ್ರಮ

| | | |
|---|---|---|
| 9–6–84 | ಶನಿವಾರ | ಶ್ರೀ ಕೃಷ್ಣಸ್ವಾಮಿ ಪ್ಲವೋತ್ಸವ. |
| 10–6–84 | ಭಾನುವಾರ | ಶ್ರೀ ಸುಂದರರಾಜಸ್ವಾಮಿ ಪ್ಲವೋತ್ಸವ. |
| 11–6–84 | ಸೋಮವಾರ | ಶ್ರೀ ಪದ್ಮಾವತೀ ಅಮ್ಮನವರ ಪ್ಲವೋತ್ಸವ. |
| 12–6–84 | ಮಂಗಳವಾರ | ,, ,, |
| 13–6–84 | ಬುಧವಾರ | ,, ,, |

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೪]** **ಮೇ ೧೯೮೪** **[ಸಂಚಿಕೆ ೧೨**


# ವಿಷಯಸೂಚಿ




ಹನುಮಂತ ಹರಿಸೇವಕರಲ್ಲಿ, ಹರಿದಾಸರಲ್ಲಿ ಪ್ರಥಮ ಶ್ರೇಣಿಗೆ ಸೇರಿದವನು. 'ದಾಸೋಹಂ ಕೋಸಲೇಂದ್ರಸ್ಯ' ಎಂಬುದೇ ಅವನ ಪರಿಚಯ ಪ್ರವರ. ಇಡೀ ರಾಮಾಯಣದಲ್ಲಿ ಹರಿಸೇವೆಯಲ್ಲಿ ಕಾಯೇನ ವಾಚಾ ಮನಸಾ ನಿರತರಾದವರಲ್ಲಿ ಹನುಮಂತನನ್ನು ಹೊರತುಗೊಳಿಸಿದರೆ ಸಿಗುವವರು ಬೆರಳ ಮೇಲೆಣಿಸುವಷ್ಟು, ಒಬ್ಬ ಲಕ್ಷ್ಮಣ, ಒಬ್ಬ ವಿಭೀಷಣ, ಒಬ್ಬ ಒಬ್ಬ ಭರತ – ಹೀಗೆ ಹಲವು ಮಂದಿಯಲ್ಲ. ಆದರೆ ಇವರೆಲ್ಲರಿಗೂ ಆಗಾಗ ಸಂದೇಹ, ಸ್ವಂತ ಅಭಿಪ್ರಾಯ, ಮೊದಲಾದ ಸೇವಾದೂರವಾಗುವ ಗುಣಗಳುಂಟಾದರೂ ಹನುಮಂತನಿಗೆ ಇವಾವುವೂ ಇಲ್ಲವೆನ್ನಬೇಕು. ಹಾಗೆಂದೇ ಅವನು ಇವರಲ್ಲೆಲ್ಲ ಮೊದಲಿಗೆ ನೆನಪಿಗೆ ಬರುತ್ತಾನೆ.

ಜೊತೆಗೇ ಹನುಮಂತನ ಜೀವನದಲ್ಲಿ ಇತರರಿಗಿಲ್ಲದ ಮತ್ತೊಂದು ಲೌಕಿಕ ಬಂಧನವೂ ಉಂಟು. ಅದೆಂದರೆ ಸುಗ್ರೀವ ಸಖ್ಯ, ಸುಗ್ರೀವ ಸೇವೆ. ಹನುಮಂತ ಮೊದಲಿಗೆ ಸುಗ್ರೀವನ ಮಂತ್ರಿ. ಸುಗ್ರೀವನ ಹಿತಕ್ಕೆ ಭಂಗ ಬಾರದಂತೆಯೇ ರಾಮನ ಸೇವೆಯನ್ನೂ ಗೈದ ಸಾಹಸಿ. ಎಂದರೆ ಲೌಕಿಕಾಲೌಕಿಕಗಳನ್ನು ಯಶಸ್ವಿಯಾಗಿ ಬೆಸೆದು, ಒಂದನ್ನು ಗೈಯುತ್ತಲೇ ಮತ್ತೊಂದನ್ನೂ ನಿರ್ವಹಿಸಿದ ಮಹಾಮುತ್ಸದ್ದಿ ಎನ್ನಬಹುದೇನೊ. ಅಲ್ಲಲ್ಲಿ ನೇರ ಘರ್ಷಣೆಯಾಗುವಂತಹ ಸಂದರ್ಭದಲ್ಲಿಯೂ, ತನ್ನ ಬುದ್ಧಿವಂತಿಕೆಯಿಂದ ಘರ್ಷಣೆಯಿಂದ ದೂರವಾಗಿ ಆದರೂ ತನ್ನ ಖಚಿತವಾದ ಅಭಿಪ್ರಾಯಗಳಿಗೆ ಬದ್ಧನಾಗಿ ಸರ್ವಹಿತವನ್ನು ಸಾಧಿಸಿದವನು ಎನ್ನಬೇಕು. ಉದಾಹರಣೆಗೆ ವಿಭೀಷಣ ಶರಣಾಗತಿಯ ಸಂದರ್ಭ. ಇಲ್ಲಿ ಸುಗ್ರೀವನ ಅಭಿಪ್ರಾಯಕ್ಕೂ ಹನುಮಂತನ ಅಭಿಪ್ರಾಯಕ್ಕೂ ನೇರ ವಿರೋಧ. ಆದರೂ ಅದರ ಅಭಿವ್ಯಕ್ತಿಯ ವಿಧಾನದಿಂದ ಸುಗ್ರೀವನೂ ತೃಪ್ತನಾದದ್ದೇ ಅಲ್ಲದೆ, ಸಹಕರಿಸುವಂತೆಯೂ ಆದ. ಇದರ ಮುನ್ಸೂಚನೆಯಂತೆಯೇ ಶ್ರೀ ರಾಮಚಂದ್ರ ಪ್ರಭು ಮೊದಲಿಗೇ ಹನುಮಂತನ ಮಾತುಗಾರಿಕೆಯ ಬಗ್ಗೆ ಮೆಚ್ಚುಗೆಯನ್ನು ಸೂಚಿಸುತ್ತಾನೆ.

ಹನುಮಂತನ ಗುಣಗಣಗಳ ಬಗ್ಗೆಯೂ ನೆನೆಯುವುದು ಚೆನ್ನ. ಅವನು ವೇದವಿದ, ವ್ಯಾಕರಣಕೋವಿದನಾಗಿದ್ದಷ್ಟೇ ಅತಿ ವೀರನೂ ಆಗಿದ್ದ ಎಂಬ ಅಂಶ 'ಗೋಷ್ಪದೀಕೃತ ವಾರಾಶಿಂ'– ಎಂಬುದರಿಂದ ಸ್ಪಷ್ಟವಾಗುತ್ತದೆ. ಸೀತೆಯನ್ನೆತ್ತಿಕೊಂಡು ವಾರಾಶಿಯನ್ನುತ್ತರಿಸುತ್ತೇನೆ ಎಂಬುದು ಅವನ ಮಾತು. ಸೀತೆಯ ಅನುಮಾನ, ದೃಢವ್ರತಗಳು ಬೇರೆಯಾಗಿದ್ದು ಅವನ ಸಲಹೆಗೆ ಒಪ್ಪದಾದಳು ಎಂದಾಗ ಕವಿ ಮನ ನುಡಿಯುತ್ತದೆ 'ವಾಕ್ಯೋವಿದಂ ಹನುಮನಂಗನೆಯ ಇಂಗಿತವನರಿಯದಾದನೆನೆ ಬ್ರಹ್ಮಚರ್ಯಕೆ ಗರಿಮೆಯೈಸೆ'– ಅಂತಹ ನಿಷ್ಠುರ ಬ್ರಹ್ಮಚರ್ಯ ಅವನದು. ಮಾತ್ರ ರಾಮ ಕಾರ್ಯದಲ್ಲಿ ತನ್ನೆಲ್ಲ ಶಕ್ತಿಯನ್ನೂ, ಚಿಂತನೆಯನ್ನೂ ಮುಡಿಪಾಗಿಡುವ ಏಕನಿಷ್ಠೆಯಿದ್ದದ್ದರಿಂದಲೇ ಚಿರಂಜೀವಿಗಳಲ್ಲಿ ಒಬ್ಬನಾದ. 'ಅಶ್ವತ್ಥಾಮೋ ಬಲಿರ್ವ್ಯಾಸೋ ಹನುಮಾಂಶ್ಚ ವಿಭೀಷಣಃ......' ಇಂದೂ ಅಭ್ಯಂಜನ ಮಾಡಿಸುವಾಗ ತಾಯಂದಿರು ಮಕ್ಕಳನ್ನು ಆಶೀರ್ವದಿಸುವ ಮಾತಿನಲ್ಲಿ ಸೇರಿಹೋದ.

ಕನ್ನಡಿಗರಿಗೆ ಹನುಮಂತ ಇತರರಿಗಿಂತ ಹೆಚ್ಚು ಹತ್ತಿರದವನು. ಕೇಳಿಲ್ಲವೇ "ಹನುಮನುದಿಸಿದ ನಾಡು......". ಮಹಿಷೂರನಾಡನ್ನು ಕಿಷ್ಕಿಂಧೆಯೆಂದು ಗುರುತಿಸುವ ಸಂಪ್ರದಾಯವಿಲ್ಲದೆಯಿಲ್ಲ. ಹನುಮ ಭೀಮರಾದಮೇಲೆ ಅವತರಿಸಿದ ಮಧ್ವರಿಗೆ ಹನುಮಂತನ ಅವತಾರವೆಂದೇ ಗೌರವ ಸಲ್ಲುತ್ತಿದೆ. ಕರ್ನಾಟಕದ ಶ್ರೇಷ್ಠ ಆಚಾರ್ಯರಲ್ಲಿ ಒಬ್ಬರಾದ ವ್ಯಾಸರಾಯರು ಸಾವಿರ ಹನುಮಂತ ವಿಗ್ರಹಗಳನ್ನು ಪ್ರತಿಷ್ಠಿಸಿದರೆಂದು ಪ್ರತೀತಿ. ಊರಿಗೊಂದು ಹನುಮದೇವಾಲಯವಿರುವುದು ಕರ್ನಾಟಕದ ಒಂದು ವೈಶಿಷ್ಟ್ಯ. ಹನುಮಂತನು ಶಿವಾಂಶನೆಂಬ ಕಾರಣದಿಂದ ಶಿವಾಲಯಗಳಲ್ಲೂ ಹನುಮಂತನಿಗೆ ಸ್ಥಾನವುಂಟು. ಹೀಗಾಗಿ ಹನುಮಂತ ಭಾರತದಲ್ಲಿಯೇ ಹೆಸರಾಂತವನಾಗಿದ್ದಾನೆ. ಎಂತಲೇ ಹಿರಿಯರೆಂದರು 'ಹನುಮನ ಮತವೇ ಹರಿಯ ಮತವು'. ರಾಮಾಯಣದಲ್ಲಿನ ವಿಭೀಷಣ ಶರಣಾಗತಿಯ ಸಂದರ್ಭದಲ್ಲಿ ಹನುಮಂತನ ಅಭಿಮತಕ್ಕೆ ಈ ಮಾತು ಸಾಧಾರಣೀಕೃತ ರೂಪವಾಗುತ್ತದೆ.

ಇಂತಲ್ಲಿ ಹನುಮಜಯಂತಿ ಮೇ ತಿಂಗಳಿನಲ್ಲಿ. ಒಂದು ಸ್ವಾರಸ್ಯವೆಂದರೆ, ಭಗವಂತನ ಪೂಜೆಯನ್ನು ಏಪ್ರಿಲ್ ತಿಂಗಳಿನಲ್ಲಿ ಶ್ರೀರಾಮನವಮಿಯಾಗಿ ಮಾಡಿದ್ದೇವೆ. ಈಗ ಭಕ್ತ ಶ್ರೇಷ್ಠನ ಪೂಜೆಯ ಅವಕಾಶ ದೊರೆತಿದೆ. ಹನುಮಂತನು ಮೆಚ್ಚುವಂತೆ ಹರಿಯ ದಾಸರಾಗಿ ನಡೆದರೆ ಅದು ಹರಿಪ್ರೀತಿಯೂ ಆಗುವುದೆಂದು ಮುಂದೆನಡೆಯುವ. 

# ದಾಸರು ಕಂಡ ಅಹೋಬಿಲ

ಆಂಧ್ರಪ್ರದೇಶ್ ಕರ್ನೂಲ್ ಜಿಲ್ಲಾ ಆಳ್ಳಗಡ್ಡ ತಾಲ್ಲೂಕಿನಲ್ಲಿರುವ ಪ್ರಸಿದ್ಧ ವೈಷ್ಣವ ಕ್ಷೇತ್ರ ಅಹೋಬಿಲ. ಅಹೋಬಿಲದ ಪ್ರಸಿದ್ಧಿಗೆ ಮೂರು ಕಾರಣಗಳನ್ನು ಹೇಳಬಹುದು, ಒಂದು ಅದು ನರಸಿಂಹ ಕ್ಷೇತ್ರ. ಎರಡನೆಯದು ಅದು ರಾಮಾನುಜರು ಸ್ಥಾಪಿಸಿದ ವೈಷ್ಣವ ಮಠ ಕೇಂದ್ರ. ಮತ್ತೊಂದು ವಿಶಿಷ್ಟಾದ್ವೈತಿ ಹಾಗೂ ದ್ವೈತಿಗಳಿಗೆ ಪವಿತ್ರಕ್ಷೇತ್ರವಾಗಿರುವುದು.

ಬ್ರಹ್ಮಾಂಡ ಪುರಾಣದಲ್ಲಿ ಅಹೋಬಿಲ ನರಸಿಂಹನ ಪ್ರಾದುರ್ಭಾವದ ಕಥೆಯಿದೆ. ಸ್ವಾಮಿ ರಾಕ್ಷಸಸಂಹಾರ ಮಾಡಿದ ನಂತರ ದೇವತೆಗಳು 'ನರಸಿಂಹಮ್ ಪರಮಮ್ ದೇವಮ್ ಅಹೋಬಿಲಮ್ ಅಹೋಬಿಲಮ್' ಎಂದು ಹೊಗಳಿದರು. ಆದ್ದರಿಂದ ಆ ಕ್ಷೇತ್ರಕ್ಕೆ ಅಹೋಬಿಲವೆಂದು ಹೆಸರು. ಆಮೇಲೆ ಮೇಲಿದ್ದ ಗುಹೆಯಲ್ಲಿ ಗರುತ್ಮಂತನು ಸ್ವಾಮಿಸಾಕ್ಷಾತ್ಕಾರ ಪಡೆದ ನಂತೆ. ಆದ್ದರಿಂದ ಅಹೋಬಿಲವೆಂದು ಹೆಸರು. ನವನಾರಸಿಂಹ ಕ್ಷೇತ್ರಗಳಲ್ಲಿ ಅಹೋಬಿಲ ಒಂದು. ಮಂಗಳಗಿರಿ, ಸಿಂಹಾಚಲ, ಅಂತರ್ವೇದಿ, ವೇದಾದ್ರಿ, ಯಾದವಾದ್ರಿ, ಖಾದ್ರಿ, ಅಕಿರಿಪಲ್ಲಿ, ನಗರಿ– ಇತರ ನಾರಸಿಂಹ ಕ್ಷೇತ್ರಗಳು.

ವೈಷ್ಣವರಿಗೆ ಪವಿತ್ರಗ್ರಂಥ ನಾಲಾಯಿರ ದಿವ್ಯಪ್ರಬಂಧ. 12 ಆಳ್ವಾರ್ ಮಹನೀಯರು ಹಾಡಿದ ಪಾಶುರಗಳ ಸಂಕಲನ ನಾಲಾಯಿರ ದಿವ್ಯಪ್ರಬಂಧ. ಅವರಲ್ಲಿ ತಿರುಮಂಗೈಆಳ್ವಾರ್ ಅಹೋಬಿಲವನ್ನು ಕುರಿತು 10 ಪಾಶುರಗಳು ಹಾಡಿದ್ದಾರೆ. ಅವರು ಶಿಂಗವೇಳ್ ಕುನ್ರಮ್ ಎಂದು ಅಹೋಬಿಲವನ್ನು ಕುರಿತು ಹಾಡಿದ್ದಾರೆ.

ತೆಲುಗಿನಲ್ಲಿ ಎರ್ರಾಪ್ರಗಡ ನೃಸಿಂಹ ಪುರಾಣದಲ್ಲಿ ಅಹೋಬಿಲ ಮಹಿಮೆಯನ್ನು ಹೊಗಳಿದ್ದಾನೆ. ಆ ಕವಿ ತನ್ನ ಪುರಾಣದಲ್ಲಿ ನರಸಿಂಹನ ಪ್ರಾದುರ್ಭಾವಕ್ಕೆ ಮಾತ್ರ ಪ್ರಾಧಾನ್ಯ ನೀಡಿದ್ದಾನೆ. ಅದರಲ್ಲಿ ಭಕ್ತರ ಕಥೆಗಳಿಲ್ಲ. ತೀರ್ಥಗಳ ಹೆಸರುಗಳು ಸಂಗ್ರಹವಾಗಿವೆ. ಆದರೆ ಆಂಧ್ರವಾಗ್ಗೇಯಕಾರರಾದ ಅನ್ನಮಾಚಾರ್ಯರು ಅಹೋಬಿಲದಲ್ಲಿದ್ದು ಆದಿವಣ್ ಶಠಗೋಪಗುರುಗಳಿಂದ ವೇದವೇದಾಂಗಾದಿ ವಿದ್ಯೆಗಳನ್ನು ಅರಿತವರು ಮತ್ತು ನರಸಿಂಹ ಉಪಾಸಕರು. ನರಸಿಂಹಮಂತ್ರಕ್ಕೆ ಅನುಗುಣವಾಗಿ 32 ಸಾವಿರ ಕೀರ್ತನೆಗಳನ್ನು ಹಾಡಿದವರು. ತಮ್ಮ ಕೀರ್ತನೆಗಳಲ್ಲಿ ಅಹೋಬಿಲ ಪ್ರಶಂಸೆ ಮಾಡಿದ್ದಾರೆ. ಆ ಕ್ಷೇತ್ರ ಪರಿಸರದಲ್ಲಿದ್ದ ನವನಾರಸಿಂಹ ಕ್ಷೇತ್ರಗಳನ್ನು ಹೊಗಳಿದ್ದಾರೆ.

ಅಹೋಬಿಲೇಶ್ವರುಡರಿಕುಲದಮನುಡು

ಭವನಾಶನೀತೀರ ಅಹೋಬಿಲನಾರಸಿಂಹೆ ನರಸಿಂಹನ ಸಂಸ್ಕೃತ ಸಂಕೀರ್ತನೆಗಳನ್ನೂ ಹಾಡಿದ್ದಾರೆ.

ಜಯ ಜಯ ನೃಸಿಂಹ ಸರ್ವೇಶ
ಭಯಹರ ವೀರ ಪ್ರಹ್ಲಾದ ವರದ
ಅಹೋಬಿಲೇಶ ಪ್ರಹ್ಲಾದವರದ
ಸಹಜ ಶ್ರೀ ವೇಂಕಟಾಚಲವಾಸ
ನಮೋ ನಮೋ ಲಕ್ಷ್ಮೀ ನರಸಿಂಹಾ
ನಮೋ ನಮೋ ಸುಗ್ರೀವ ನರಸಿಂಹ




ಕನ್ನಡದಲ್ಲಿ ಅಹೋಬಿಲ ನರಸಿಂಹಸ್ತುತಿ ಮಾಡಿದವರಲ್ಲಿ ಪುರಂದರದಾಸರು ಆದ್ಯರು. ಕನಕದಾಸರು, ಗೋಪಾಲದಾಸರು, ಜಗನ್ನಾಥದಾಸರು ಅಹೋಬಿಲಪ್ರಶಂಸೆ ಮಾಡಿದವರಲ್ಲಿ ಪ್ರಸಿದ್ಧರು. ಇವರ ಕೀರ್ತನೆಗಳಲ್ಲಿ ಕ್ಷೇತ್ರಮಹಿಮೆ, ತೀರ್ಥಗಳ ಪ್ರಾಮುಖ್ಯ, ಭಕ್ತರ ಕಥೆಗಳು ಕಾಣುತ್ತವೆ.

ಮಹದಾದಿದೇವ ನಮೋ
ಮಹದಾದಿ ದೇವ ನಮೋ
ಮಹಾಮಹಿಮನೆ ನಮೋ ಪ್ರ
ಹ್ಲಾದವರದ ಅಹೋಬಿಲ ನಾರಸಿಂಹ
ಧರಣಿ ಗುಬ್ಬಸವಾಗೆ ತಾರಾಪಥವು
ನಡುಗೆ
ಸುರರು ಕಂಗೆಟ್ಟೋಡೆ ನಭವ ಬಿಟ್ಟು
ತರು ಗಿರಿಗಳಲ್ಲಾಡೆ ಶರಧಿಗಳು
ಕುದಿದುಕ್ಕೆ
ಉರಿಯನುಗುಳುತ ಉದ್ಭವಿಸಿದೆ
ನರಸಿಂಹ
ಸಿಡಿಲಿನಂತೆ ಗರ್ಜಿಸುತ ಕುಡಿಯುವ
ನಾಲಿಗೆ ಚಾಚಿ
ಅಡಿಗಡಿಗೆ ಲಂಘಿಸುತ
ಕಡುಕೋಪದಿಂದ
ಮುಡಿಪಿಡಿದು ರಕ್ಕಸನ ಕೆಡಹಿ
ನಖದಿಂದೊತ್ತಿ
ಕಡು ಉದರ ಬಗಿದೆ ಕಡುಗಲಿ
ನಾರಸಿಂಹ
ಸರಸಿಜೋದ್ಭವ ಹರ ಪುರಂದರಾದಿ
ಸಮಸ್ತ
ಸುರರು ಅಂಬರದಿ ಪೂಮಳೆಯ ಕರೆಯೆ
ಸಿರಿಸಹಿತ ಗರುಡಾದ್ರಿಯಲಿ ನಿಂತು
ಭಕುತನ
ಕರುಣಿಸಿದೆ ಪುರಂದರವಿಠಲ ನರಸಿಂಹ

**ಡಾ॥ ಕೆ. ಸರ್ವೋತ್ತಮನ್**

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಪುರಂದರದಾಸರು ಈ ಕೀರ್ತನೆಯಲ್ಲಿ ನರಸಿಂಹನ ಪ್ರಾದುರ್ಭಾವಕ್ಕೆ ಪ್ರಾಧಾನ್ಯ ಕೊಟ್ಟರು. ಈ ವರ್ಣನೆ ನೋಡಿದರೆ ಅವರು ಜ್ವಾಲಾನರಸಿಂಹಮೂರ್ತಿಯನ್ನಾಗಲಿ ಅಥವಾ ಪ್ರಹ್ಲಾದನರಸಿಂಹನನ್ನಾಗಲಿ ಹೊಗಳಿದ್ದಾರೆಂದು ತೋರುತ್ತದೆ. ಗರುಡಾಚಲ ಪರ್ವತಗಳ ಮಧ್ಯವಲ್ಲಿ, ಅಚಲ ಛಾಯಾ ಪ್ರದೇಶದಲ್ಲಿ ಶ್ರೀನರಸಿಂಹನು ಜ್ವಾಲಾರೂಪಿಯಾಗಿ ಕೋಟಿ ಸೂರ್ಯಪ್ರಕಾಶನಾಗಿ ಕಾಣುತ್ತಾನೆ. ಬೆಟ್ಟದ ಅಹೋಬಿಲದಲ್ಲಿ ಶ್ರೀನರಸಿಂಹ ಸ್ವಾಮಿಗೂ ಉಗ್ರಸ್ತಂಭಕ್ಕೂ ಮಧ್ಯದಲ್ಲಿ ಪ್ರಹ್ಲಾದ ನರಸಿಂಹನಿದ್ದಾನೆ.

ಕನಕದಾಸರು ವಿಶಿಷ್ಟಾದ್ವೈತರಾಗಿದ್ದು ಮತ್ತೆ ದ್ವೈತರಾದರೆಂದು ಹೇಳಿಕೆ. ಅವರು ಉದ್ದಂಡ ಅಹೋಬಿಲ ನೃಸಿಂಹ ಸ್ತುತಿಗಳನ್ನು ಮಾಡಿದ್ದಾರೆ. ಉದ್ದಂಡ ನೃಸಿಂಹನ ಸ್ತುತಿಯಲ್ಲಿ ಊರಿನ ಹೆಸರಿಲ್ಲ. ಆದರೆ ಅಹೋಬಿಲಕ್ಕೆ ಸೇರಿದ ಗುಹೆಯಲ್ಲಿ ವೀರಸಿಂಹನಿದ್ದಾನೆ. ಆ ದೇವರು ಬೀಭತ್ಸಮೂರ್ತಿ. ಈ ಮೂರ್ತಿಗಳನ್ನೇ ಕನಕದಾಸರು ಹಾಡಿರಬಹುದು.

ಕಂಡೆ ನಾ ತಂಡತಂಡದ
ಹಿಂಡು ದೈವ ಪ್ರ
ಚಂಡ ರಿಪುಗಂಡ ಉದ್ದಂಡ ನರಸಿಂಹನ
ಗುಡುಗುಡಿಸಿ ಕಂಬದಲಿ ಧಡಧಡ
ಸಿಡಿಲು ಸಿಡಿಯೆ
ಕಿಡಿಕಿಡಿಸೆ ನುಡಿಯುಡಗಲೊಡನೆ
ಮುಡಿವಿಡಿದು
ಗಡಗಡನೆ ನಡುನಡುಗೆ ಗುಡುಗುಡಿಸಿ
ಸಭೆ ಬೆದರೆ
ಹಿಡಿಹಿಡಿದು ಹಿರಣ್ಯಕನ ತೊಡೆಯಲ್ಲಿ
ಕೆಡಹಿದನ
ಉರದೊಳಪ್ಪಳಿಸಿ ಅರಿ ಶಿರವ
ಸರಸರ ಸೀಳಿ
ಪರಿಪರಿಯಲೀ ಚರ್ಮ ಎಳೆದೆಳೆದು
ಎಲುವು ನರ
ನರವನ್ನು ತೆಗೆದು ನಿರ್ಗಲಿತ
ಶೋಣಿತ ಸುರಿಯೆ
ಹರಿಹರಿದು ಕರುಳ ಕೊರಳೊಳಗೆ
ಇಟ್ಟವನ

ಕನಕದಾಸರೇ ದಶಾವತಾರಗಳನ್ನು ಅಹೋಬಿಲ ನೃಸಿಂಹ ಸ್ತುತಿಯಲ್ಲಿ ಜತೆ ಮಾಡಿ ಹಾಡಿದ ರೀತಿಯನ್ನು ನೋಡಿ.

ಏನು ಕಾರಣ ಬಾಯ ತೆರದಿ-ಪೇಳೆಲೋ
ದಾನವಾಂತಕ ಅಹೋಬಿಲ
ನಾರಸಿಂಹನೆ
ನಿಗಮ ಚೋರನ ಕೊಲಲು
ತೆರೆದೆಯೊ ಬಾಯ
ನಗವ ಬೆನ್ನಲಿ ಪೊತ್ತು ನಡುಗಿ
ತೆರೆದೆಯೊ ಬಾಯ ಭೂ
ಮಿಗಳ್ಳನ ಕೊಂದು ಬಳಲಿ
ತೆರೆದೆಯೊ ಬಾಯ
ಜಗವರಿಯೆ ಪೋರುರವಿರಿದ ಪ್ರಹ್ಲಾದ
ವರದ ಅಹೋಬಿಲ ನರಸಿಂಹನೆ

ಬಲಿಯ ದಾನವ ಬೇಡಲೆಂದು
ತೆರೆದೆಯೊ ಬಾಯ
ಛಲದಿಂದ ಕ್ಷತ್ರಿಯರ ಕೊಲಲು
ತೆರೆದೆಯೊ ಬಾಯ
ಕುಲಸತಿಯ ಅರಸಿ ಕಾಣದೆ ತೆರೆದೆಯೊ
ಬಾಯ
ಮಲೆತು ಮಾವನ ಕೊಂದುನಿಂದೆ-ಇಂಥ
ಇಳೆಯ ಬಾರದ ಭೂಮಿಗಿಳಿದ ನಾರಸಿಂಹ

ನಾರಿಯರ ಚೆಲ್ವಿಕೆಯ ನೋಡಿ
ತೆರೆದೆಯೊ ಬಾಯ
ಏರಿ ಅಶ್ವವ ಮೆಟ್ಟಿ ಆಳಲಿ
ತೆರೆದೆಯೊ ಬಾಯ
ವಾತ ಪಿತ ಕಾಗಿನೆಲೆಯಾದಿಕೇಶವ ರಂಗ
ಧೀರ ಶ್ರೀನಾಥ ಭವನಾಶ-ಪೇಳೊ
ಪೇಳಲೇತಕೆ ಅಹೋಬಿಲ ನರಸಿಂಹನೆ

ಲೋಕದಲ್ಲಿ ಬಾಯಿ ತೆರೆಯುವುದಕ್ಕೆ ಎಷ್ಟೋ ಕಾರಣಗಳನ್ನು ಹೇಳುತ್ತೇವೆ. ಕೋಪ ಕಾರಣವಾಗಬಹುದು, ಯಾಚನೆಯಾಗಬಹುದು, ವಿಚಿತ್ರ ದೃಶ್ಯವನ್ನು ನೋಡುವಾಗ ಬಾಯಿ ತೆರೆಯಬಹುದು. ಈ ಕಾರಣಗಳನ್ನು ಅವತಾರಗಳಿಗೆ ಅನ್ವಯಿಸುವುದಲ್ಲಿ ಕಾವ್ಯಸೌಂದರ್ಯ ಕಾಣುತ್ತದೆ. ಕ್ರಮವಾಗಿ ಇಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶು

(36 ನೇ ಪುಟ ನೋಡಿ)

# ಶ್ರೀ ಮದ್ಭಗವದ್ಗೀತೆ

## ೧೨ ನೆಯ ಅಧ್ಯಾಯ

# ಭಕ್ತಿಯ ವಿಚಾರ

ಅರ್ಜುನ ಉವಾಚ–

ಏವಂ ಸತತಯುಕ್ತಾ ಯೇ
ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ
ತೇಷಾಂ ಕೇ ಯೋಗವಿತ್ತಮಾಃ ॥ 1

ಅರ್ಜುನ : ಯಾವ ಭಕ್ತರು ಯಾವಾಗಲೂ ನಿನ್ನ ಭಕ್ತಿಯನ್ನು ಮಾಡುವುದರಲ್ಲಿಯೇ ತೊಡಗಿ ನಿನ್ನನ್ನು ಧ್ಯಾನಮಾಡುತ್ತಾರೋ ಮತ್ತು ಯಾರು ಅವ್ಯಕ್ತ–ಅಕ್ಷರ ಶಬ್ದವಾಚ್ಯವಾದ ಶ್ರೀತತ್ತ್ವವನ್ನು ಧ್ಯಾನಮಾಡುತ್ತಾರೋ ಇವರಲ್ಲಿ ಯಾರು ಯೋಗವನ್ನು ಚೆನ್ನಾಗಿ ತಿಳಿದವರು?

ಶ್ರೀಭಗವಾನುವಾಚ–

ಮಯ್ಯಾವೇಶ್ಯ ಮನೋ ಯೇ ಮಾಂ
ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಃ
ತೇ ಮೇ ಯುಕ್ತತಮಾ ಮತಾಃ ॥ 2

ಶ್ರೀಕೃಷ್ಣ; ಯಾರು ನನ್ನಲ್ಲಿ ಮನಸ್ಸಿಟ್ಟು ಹೆಚ್ಚಿನ ವಿಶ್ವಾಸದಿಂದ ಯಾವಾಗಲೂ ನನ್ನ ಪ್ರೀತಿಯನ್ನು ಮಾಡುವುದರಲ್ಲಿಯೇ ತೊಡಗಿ, ನನ್ನನ್ನು ಧ್ಯಾನ ಮಾಡುತ್ತಾರೋ ಅವರು ಬಹಳ ಹೆಚ್ಚಿನ ಯೋಗಿಗಳೆಂದು ನನ್ನ ಅಭಿಪ್ರಾಯ.

ಯೇತ್ವಕ್ಷರಮನಿರ್ದೇಶ್ಯಂ
ಅವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ
ಕೂಟಸ್ಥಮಚಲಂ ಧ್ರುವಮ್ ॥ 3

ಸನ್ನಿಯಮ್ಯೇಂದ್ರಿಯಗ್ರಾಮಂ
ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ
ಸರ್ವಭೂತಹಿತೇ ರತಾಃ ॥ 4

ಯಾರು ನಿರೂಪಣೆಗೆ ಸಿಗದ ಎಲ್ಲೆಲ್ಲಿಯೂ ತುಂಬಿರುವ, ಊಹೆಗೆ ನಿಲುಕದ ಆಕಾಶದಲ್ಲಿ ವ್ಯಾಪಿಸಿ ಜೀವರಾಶಿಯನ್ನು ನಿಯಮಿಸುವ, ನಿಶ್ಚಲವೂ ಶಾಶ್ವತವೂ ಆದ ಶ್ರೀತತ್ತ್ವವನ್ನು ಉಪಾಸನೆ ಮಾಡುತ್ತಾರೋ, ಇಂದ್ರಿಯಗಳನ್ನೆಲ್ಲ ಬಿಗಿಹಿಡಿದು ಎಲ್ಲವನ್ನೂ ಒಂದೇ ರೀತಿ ಕಾಣುತ್ತ ಎಲ್ಲ ಪ್ರಾಣಿಗಳ ಹಿತದಲ್ಲಿ ಆಸಕ್ತರಾದ ಅವರೂ ನನ್ನನ್ನೇ ಪಡೆಯುತ್ತಾರೆ.

ಕ್ಲೇಶೋಧಿಕತರಸ್ತೇಷಾಂ
ಅವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ
ದೇಹವದ್ಭಿರವಾಪ್ಯತೇ ॥ 5

ಅವ್ಯಕ್ತವಾದ ಶ್ರೀತತ್ತ್ವದಲ್ಲಿ ಮನಸ್ಸಿಟ್ಟವರಿಗೆ ಆಯಾಸವು ಹೆಚ್ಚು, ಏಕೆಂದರೆ ಅವ್ಯಕ್ತದ ಉಪಾಸನೆ ದುಃಖಸಾಧ್ಯವಾದದ್ದು.

ಯೇ ತು ಸರ್ವಾಣಿ ಕರ್ಮಾಣಿ
ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ
ಮಾಂ ಧ್ಯಾಯಂತ ಉಪಾಸತೇ ॥ 6

ತೇಷಾಮಹಂ ಸಮುದ್ಧರ್ತಾ
ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ಪಾರ್ಥ
ಮಯ್ಯಾವೇಶಿತಚೇತಸಾಮ್ ॥ 7

ಅರ್ಜುನ, ಯಾರು ಎಲ್ಲ ಕರ್ಮಗಳನ್ನೂ ನನಗೊಪ್ಪಿಸಿ ನನ್ನನ್ನೇ ಗತಿಯೆಂದು ನಂಬಿ ಅನನ್ಯ ಭಕ್ತಿಯಿಂದ ಧ್ಯಾನ ಮಾಡುತ್ತಿರುವರೋ, ನನ್ನಲ್ಲಿ ಮನಸಿಟ್ಟ ಅವರನ್ನು ತಡವಿಲ್ಲದೆ ನಾನು ಸಾವಿನ ರೂಪವಾದ ಸಂಸಾರವೆಂಬ ಸಮುದ್ರದಿಂದ ಮೇಲಕ್ಕೆತ್ತುತ್ತೇನೆ.

ಮಯ್ಯೇವ ಮನ ಆಧತ್ಸ್ವ
ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ
ಅತ ಊರ್ಧ್ವಂ ನ ಸಂಶಯಃ ॥ 8

ನನ್ನಲ್ಲಿಯೇ ಮನಸ್ಸನ್ನಿಡು. ನನ್ನಲ್ಲಿ ಬುದ್ಧಿಯನ್ನು (ನಿಶ್ಚಯವನ್ನು) ಇಡು. ಈ ದೇಹವನ್ನು ಬಿಟ್ಟ ಮೇಲೆ ನನ್ನಲ್ಲಿಯೇ ವಾಸಮಾಡುವೆ, ಸಂಶಯವಿಲ್ಲ.

ಅಥ ಚಿತ್ತಂ ಸಮಾಧಾತುಂ
ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸಯೋಗೇನ ತತೋ
ಮಾಮಿಚ್ಛಾಪ್ತುಂ ಧನಂಜಯ ॥ 9

ಅರ್ಜುನ, ಒಂದೊಮ್ಮೆ ನನ್ನಲ್ಲಿ ಸ್ಥಿರವಾಗಿ ಮನಸ್ಸನ್ನು ನೆಲೆಗೊಳಿಸಲು ನಿನಗೆ ಆಗದೆಹೋದರೆ ಮತ್ತೆ ಮತ್ತೆ ನಿಲ್ಲಿಸುವ ಉಪಾಯದಿಂದ ನನ್ನನ್ನು ಪಡೆಯಬಯಸು.

ಅಭ್ಯಾಸೇಪ್ಯಸಮರ್ಥೋಽಸಿ
ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ
ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ 11

ಅಭ್ಯಾಸವೂ ಸಾಧ್ಯವಾಗದಿದ್ದರೆ ನನ್ನ ಪ್ರೀತಿಗಾಗಿಯೇ ಕರ್ಮಗಳನ್ನು ಮಾಡಿದರೂ ಸಿದ್ಧಿ ಪಡೆಯುವೆ.

ಅಥೈತದಪ್ಯಶಕ್ತೋಽಸಿ
ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮ ಫಲತ್ಯಾಗಂ
ತತಃ ಕುರು ಯತಾತ್ಮವಾನ್ ॥ 11

ಇದನ್ನೂ ಮಾಡುವುದಕ್ಕಾಗದಿದ್ದರೆ ಮನಸ್ಸನ್ನು ಬಿಗಿಹಿಡಿದು ಕರ್ಮಗಳನ್ನೆಲ್ಲ ನನಗೊಪ್ಪಿಸುತ್ತ ಮಾಡುವವನಾಗಿ ಕರ್ಮ ಫಲಗಳ ಬಯಕೆಯನ್ನೆಲ್ಲ ಬಿಡು.

ಶ್ರೇಯೋ ಹಿ ಜ್ಞಾನಮಭ್ಯಾಸಾತ್
ಜ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಃ
ತ್ಯಾಗಾಚ್ಛಾಂತಿರನಂತರಮ್ ॥ 12

ಅರಿವಿಲ್ಲದ ಅಭ್ಯಾಸಕ್ಕಿಂತ ಅರಿವು ಮೇಲು. ಅರಿವಿಗಿಂತ ಅರಿತ ಧ್ಯಾನ ಹೆಚ್ಚು. ಕೇವಲ ಧ್ಯಾನಕ್ಕಿಂತ ಕರ್ಮಗಳ ಫಲಗಳನ್ನು ಬಿಡುವುದು ಶ್ರೇಷ್ಠ. ಫಲಗಳನ್ನು ಬಿಟ್ಟಮೇಲೆ ಶಾಂತಿಗೆ ತಡವಿಲ್ಲ.

ಅದ್ವೇಷ್ಟಾ ಸರ್ವಭೂತಾನಾಂ
ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ
ಸಮದುಃಖಸುಖಃ ಕ್ಷಮೀ ॥ 13

ಸಂತುಷ್ಟಃ ಸತತಂ ಯೋಗೀ
ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿಃ
ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ 14

ಯಾವ ಪ್ರಾಣಿಗಳ ಮೇಲೂ ಹಗೆತನವಿಲ್ಲದೆ ಗೆಳೆಯನಾಗಿ ಮರುಕವುಳ್ಳವನಾಗಿ ನನ್ನದೆಂಬಭಿಮಾನವಿಲ್ಲದೆ, ನಾನೆಂಬ ಹೆಮ್ಮೆ ಇಲ್ಲದೆ, ದುಃಖದಲ್ಲಿಯೂ, ಸುಖದಲ್ಲಿಯೂ ಒಂದೇ ರೀತಿ ಇರುತ್ತ ಸಹನಶೀಲನಾಗಿ, ಯಾವನು ಯಾವಾಗಲೂ ತೃಪ್ತನಾಗಿಯೂ, ಮನಸ್ಸನ್ನು ಬಿಗಿಹಿಡಿದವನಾಗಿಯೂ, ನನ್ನ ಹಿರಿಮೆಯ ಬಗ್ಗೆ ನಿಶ್ಚಯವುಳ್ಳವನಾಗಿಯೂ, ಮನಸ್ಸನ್ನೂ ಬುದ್ಧಿಯನ್ನೂ ನನಗೊಪ್ಪಿಸಿದವನಾಗಿಯೂ, ಇರುವನೋ ಆ ನನ್ನ ಭಕ್ತನು ನನಗೆ ಪ್ರಿಯನು.

ಯಸ್ಮಾನ್ನೋದ್ವಿಜತೇ ಲೋಕಃ
ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈಃ
ಮುಕ್ತೋ ಯಃ ಸ ಚ ಮೇ ಪ್ರಿಯಃ ॥ 15

ಯಾರಿಂದ ಲೋಕ ಉದ್ವೇಗಗೊಳ್ಳುವುದಿಲ್ಲವೋ, ಯಾರು ಲೋಕದಿಂದ ಉದ್ವೇಗಗೊಳ್ಳುವುದಿಲ್ಲವೊ, ಯಾವನು ಹರ್ಷ, ಸಿಟ್ಟು, ಹೆದರಿಕೆ ತಳಮಳ – ಇವುಗಳಿಲ್ಲದಿರುವನೋ ಅವನು ನನಗೆ ಪ್ರಿಯನು.

ಅನಪೇಕ್ಷಃ ಶುಚಿರ್ದಕ್ಷಃ
ಉದಾಸೀನೋ ಗತವ್ಯಥಃ ।
ಸರ್ವಾರಂಭಪರಿತ್ಯಾಗೀ
ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ 16

ಯಾವನು ಏನನ್ನೂ ಬಯಸದಿರುವನೋ, ಶುಚಿಯಾಗಿರುವನೋ, ಸಮರ್ಥನೋ ಯಾವ ಪಕ್ಷವನ್ನೂ ಹಿಡಿಯದಿರುವನೋ, ವ್ಯಥೆ ಇಲ್ಲದಿರುವನೋ, ಫಲಾಪೇಕ್ಷೆಯಿಂದ ಯಾವುದನ್ನೂ ಮಾಡದಿರುವನೋ, ಆ ನನ್ನ ಭಕ್ತನು ನನಗೆ ಪ್ರಿಯನು.

ಯೋ ನ ಹೃಷ್ಯತಿ ನ ದ್ವೇಷ್ಟಿ
ನ ಶೋಚತಿ ನ ಕಾಂಕ್ಷತಿ ।
ಶುಭಾಶುಭಪರಿತ್ಯಾಗೀ
ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ 17

ಯಾವನು ಹಿಗ್ಗದೆ ಹೇಸದೆ ದುಃಖಿಸದೆ ಕರ್ಮದ ಶುಭಾಶುಭ ಫಲಗಳಲ್ಲಿ ನಿರ್ವಿಕಾರನಾಗಿರುವನೋ, ನನ್ನಲ್ಲಿ ಭಕ್ತಿಯುಳ್ಳವನೋ ಅವನು ನನಗೆ ಪ್ರಿಯನು.

ಸಮಃ ಶತ್ರೌ ಚ ಮಿತ್ರೇ ಚ
ತಥಾ ಮಾನಾಪಮಾನಯೋಃ ।
ಶೀತೋಷ್ಣ ಸುಖದುಃಖೇಷು
ಸಮಃ ಸಂಗವಿವರ್ಜಿತಃ ॥ 18

ತುಲ್ಯನಿಂದಾಸ್ತುತಿರ್ಮೌನೀ
ಸಂತುಷ್ಟೋ ಯೇನ ಕೇನಚಿತ್ !
ಅನಿಕೇತಃ ಸ್ಥಿರಮತಿಃ
ಭಕ್ತಿಮಾನ್ಮೇ ಪ್ರಿಯೋ ನರಃ ॥ 19

ಅಪಕಾರ ಮಾಡಿದವರಲ್ಲಿಯೂ, ಗೆಳೆಯರಲ್ಲಿಯೂ, ಮಾನವಾದಾಗಲೂ, ಅಪಮಾನವಾದಾಗಲೂ, ಶೀತ,ಉಷ್ಣ, ಸುಖ, ದುಃಖ, ಇವುಗಳಲ್ಲಿಯೂ ಒಂದೇ ರೀತಿ ಇರುತ್ತ, ವಿಷಯಗಳ ಮೇಲಿನ ಪ್ರೀತಿಯನ್ನು ಬಿಟ್ಟು, ಹೊಗಳಿಕೆಯನ್ನೂ ಬೈಗಳನ್ನೂ ಸಮವಾಗಿ ಕಾಣುತ್ತಾ, ಮನನಶೀಲನಾಗಿ ಸಿಕ್ಕಿದಷ್ಟೆ ಸಾಕೆನ್ನುತ್ತ, ಮನೆಮಠಗಳ ನಿಯಮವಿಲ್ಲದೆ ನನ್ನಲ್ಲಿ ಬುದ್ಧಿಯನ್ನು ನೆಲೆಗೊಳಿಸಿರುವ ಭಕ್ತನಾದ ಮನುಷ್ಯನು ನನಗೆ ಪ್ರಿಯನು.

ಯೇ ತು ಧರ್ಮ್ಯಾಮೃತಮಿದಂ
ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ
ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ 20

ಯಾರು ಭಗವತ್ – ಸಂಬಂಧಿಯಾದ ಮತ್ತು ಸಾವಿನ ಹೆದರಿಕೆಯನ್ನು ತಪ್ಪಿಸುವಂಥ ಇದನ್ನು ಮೈಗೂಡಿಸಿಕೊಳ್ಳುತ್ತಾರೋ, ನನ್ನಲ್ಲಿ ವಿಶ್ವಾಸವಿಟ್ಟು ನನ್ನನ್ನೇ ಗತಿಯೆಂದು ತಿಳಿದಿರುವ ಭಕ್ತರಾದ ಅವರು ನನಗೆ ಅತ್ಯಂತ ಪ್ರಿಯರು.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನ ಸಂವಾದೇ
ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ

12 ನೆಯ ಅಧ್ಯಾಯವು ಮುಗಿದುದು. ★

# ಶಂಕರಾಚಾರ್ಯರು ಹಾಗೂ ಇವರ ಅನುಯಾಯಿಗಳು

ಭಾರತೀಯ ದರ್ಶನ ಪ್ರಪಂಚದಲ್ಲಿ ಶ್ರೀ ಶಂಕರರು ಬಹುಪ್ರಸಿದ್ಧರು. ಇವರು ಬೌದ್ಧರ ಅನಾತ್ಮವಾದವನ್ನು ಖಂಡಿಸಿ ವೇದ ಪ್ರಾಮಾಣ್ಯವನ್ನು ಸ್ಥಾಪಿಸಿದರು. ಇವರ ಜೀವಿತ ಕಾಲದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಅವರು ಕ್ರಿ. ಶ. ೬ ನೆಯ ಶತಮಾನದಲ್ಲಿದ್ದರೆಂದು ಟೆಲಿಂಗ್ ಪಂಡಿತರೂ, ಕ್ರಿ.ಶ. ೬೮೦ ರಲ್ಲಿದ್ದರೆಂದು ಭಂಡಾರಕರರೂ, ೭೮೮ ರಲ್ಲಿ ಹುಟ್ಟಿ ೮೨೦ ರಲ್ಲಿ ದೈವಾಧೀನರಾದರೆಂದು ಮ್ಯಾಕ್ಸ್‌ಮೂಲರ್ ಮತ್ತು ಮ್ಯಾಕ್ಡೋನಾಲ್ಡ್ ಎಂಬ ಪಾಶ್ಚಾತ್ಯ ವಿಮರ್ಶಕರೂ, ೬ ನೆಯ ಶತಮಾನದ ಆದಿಭಾಗ ದಲ್ಲಿದ್ದರೆಂದು ಕೀತ್ ಎಂಬ ಮತ್ತೊಬ್ಬ ವಿದ್ವಾಂಸರೂ ಅಭಿಪ್ರಾಯಪಡುತ್ತಾರೆ. ಸಂಪ್ರದಾಯಾಭಿಪ್ರಾಯದಂತೆ ಅವರು ಕ್ರಿ. ಶ. ೬೩೨ ರಲ್ಲಿ ಪಶ್ಚಿಮತೀರದ ಕಾಲಡಿ ಎಂಬ ಗ್ರಾಮದಲ್ಲಿ ಜನ್ಮತಾಳಿದರು. ಮಲಬಾರಿನ ನಂಬೂದ್ರಿ ಬ್ರಾಹ್ಮಣ ಜಾತಿಗೆ ಸೇರಿದವರು. ಗೌಡಪಾದರ ಶಿಷ್ಯರಾದ ಗೋವಿಂದ ಭಗವತ್ಪಾದರಲ್ಲಿ ವೇದಾಧ್ಯಯನ ಮಾಡಿದರು. ಬಾಲ್ಯದಲ್ಲಿಯೇ ಸಂನ್ಯಾಸವನ್ನು ಸ್ವೀಕರಿಸಿ ಪರಮತಾನುಯಾಯಿಗಳಾದ ಪಂಡಿತರೊಂದಿಗೆ ವಿವಾದಮಾಡಲು ಭಾರತದಲ್ಲೆಲ್ಲ ಸಂಚಾರಮಾಡಿ ಸಿದ್ಧಾಂತಸ್ಥಾಪನೆ ಮಾಡಿ ಶೃಂಗೇರಿ, ಜಗನ್ನಾಥ, ದ್ವಾರಕ ಮತ್ತು ಕೇದಾರನಾಥಗಳಲ್ಲಿ ಮಠಗಳನ್ನು ಸ್ಥಾಪಿಸಿ ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿ ಬ್ರಹ್ಮೈಕ್ಯರಾದರು. ಇವರು ಸ್ಥಾಪಿಸಿದ ಸಿದ್ಧಾಂತಕ್ಕೆ 'ಅದ್ವೈತದರ್ಶನ'ವೆಂದು ಹೆಸರು.

ಇವರ ಸಿದ್ಧಾಂತದ ಪ್ರಕಾರ ಸೃಷ್ಟಿಯೆಲ್ಲ ಮಿಥ್ಯೆ, ಬ್ರಹ್ಮವೊಂದೆ ಸತ್ಯ. ಜಗತ್ತು ಮಿಥ್ಯೆ, ಕನಸಿನಂತೆ ಕೇವಲ ತೋರಿಕೆಯಾದುದು. ಜೀವಾತ್ಮರು ಆನಂದಸ್ವರೂಪರು. ಬ್ರಹ್ಮದ ಅಂಶಭೂತರು, ಬ್ರಹ್ಮದ ಸ್ವರೂಪವಾಗಿ ಅದ ರಲ್ಲಿಯೇ ಲೀನವಾಗತಕ್ಕವರು. ಸಂಸಾರಸ್ಥಿತಿ ಮಾಯೆ ಅಥವಾ ಅವಿದ್ಯೆಯಿಂದ ತಾತ್ಕಾಲಿಕವಾಗಿ ಅಂಟಿಕೊಂಡು ಸತ್ಯದ ಭ್ರಮೆಯಿಂದ ಕೂಡಿದೆ. ಅದರಿಂದ ಬಿಡುಗಡೆಯನ್ನು ಹೊಂದಿ ಸ್ಥಿರವಾದ ಸಚ್ಚಿದಾನಂದ ಸ್ವರೂಪವಾಗಿ ಪರಿಣಮಿಸುವುದೇ ಅದರ ಪರಮಧ್ಯೇಯ. ವೇದೋಪನಿಷತ್ತುಗಳಲ್ಲಿ ಉಕ್ತವಾಗಿರುವ, 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಶಿವೋಹಂ' ಎಂಬೀ ವಾಕ್ಯಗಳೆಲ್ಲ ಈ ಅರ್ಥವನ್ನೇ ಪ್ರತಿಪಾದಿಸುವುವು. ಸಂಸಾರವೆಂಬುದು ಭ್ರಮಾಮೂಲವಾದುದು, ಬಂಧನರೂಪವಾದುದು, ತತ್ಕಾಲಿಕವಾದುದು. ಇದನ್ನು ಕಳೆದುಕೊಳ್ಳುವುದಕ್ಕೆ ಸಾಧನ – ಚತುಷ್ಟಯ ಅವಶ್ಯಕ. ಅವುಗಳಿಂದ ಭ್ರಮನಿರಸನವಾಗಿ ಸಚ್ಚಿದಾನಂದಸ್ವರೂಪವಾದ ಬ್ರಹ್ಮತ್ವ ಸಿದ್ಧಿಸುವುದು. ಇದೇ ಮೋಕ್ಷ. ಆದರೆ ವೇದೋಪನಿಷತ್ತುಗಳಲ್ಲಿಯೇ 'ದ್ವಾಸುಪರ್ಣಾ ಸಯುಜಾ ಸಖಾಯ, ಸಮಾನಂ ವೃಕ್ಷಂ ಪರಿಷಸ್ವಜಾತೇ' ಮೊದಲಾದ ವಾಕ್ಯಗಳು ಪರಬ್ರಹ್ಮನ ದ್ವೈತಭಾಗವನ್ನು ಸೂಚಿಸುತ್ತದೆ. ಜೀವಾತ್ಮನು ಪರಬ್ರಹ್ಮನೇ ಆಗಿದ್ದ ಪಕ್ಷದಲ್ಲಿ ಜಗತ್ತಿನಲ್ಲಿ ಸುಖ ದುಃಖ ಉಚ್ಚನೀಚ ಭಾವಗಳು ಕಾಣಲು ಕಾರಣವೇನು? ದುಃಖವು ಯಾರಿಗೂ ಬೇಡವಾಗಿದ್ದರೂ ಪ್ರಾಣಿಗಳು ಅದನ್ನು ಅನುಭವಿಸಿಯೇ ತೀರಬೇಕು. ಹುಟ್ಟುವಿಕೆ, ಇರುವಿಕೆ, ಸಾಯುವಿಕೆ ಇವು ಪ್ರಾಣಿಗಳಿಗೆ ತಪ್ಪಿದ್ದಲ್ಲ. ಅನುಭವದಿಂದ ಜಗತ್ತು ಅಸ್ತಿತ್ವದಲ್ಲಿ ಇರುವುದು ಸಿದ್ಧವಾಗಿದೆ. ಆದರೂ ಇವೆಲ್ಲ ಮಿಥ್ಯವಾಗಿರುವುದು ಹೇಗೆ ಎಂಬ ಪ್ರಶ್ನೆಗಳು ಸ್ವಭಾವಿಕವಾಗಿ ಏಳುವುವು. ಈ ವೈವಿಧ್ಯವನ್ನೂ ಸಮಸ್ಯೆಯನ್ನೂ ಪರಿಹರಿಸುವುದಕ್ಕಾಗಿ ಶಂಕರರು ತಮ್ಮ ಸಿದ್ಧಾಂತವನ್ನು ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಎಂದು ಎರಡು ವಿಧವಾಗಿ ಕಲ್ಪಿಸಿದ್ದಾರೆ. ಪಾರಮಾರ್ಥವೇ ನಿಜವಾದುದು. ವ್ಯವಹಾರವು ನಿಜವಲ್ಲದಿದ್ದರೂ ಉಪಯುಕ್ತವಾದುದು. 'ತತ್ತ್ವಮಸಿ' ಮೊದಲಾದ ವಾಕ್ಯಗಳು ಪರಮಾರ್ಥವನ್ನು ಸೂಚಿಸುವುವು. ಅವು ನಿತ್ಯಸತ್ಯವಾದುವು. ಪರಬ್ರಹ್ಮನೇ ನಿಜವಾದ ಒಂದೇ ವಸ್ತು. 'ದ್ವಾಸುಪರ್ಣಾ' ಮೊದಲಾದ ವಾಕ್ಯಗಳು ಪ್ರಪಂಚದೊಳಗಿನ ಉಚ್ಚನೀಚ ಸುಖ ದುಃಖ ಭೇದಗಳು ವ್ಯವಹಾರ ದೃಷ್ಟಿಯಿಂದ ನಿಜವಾದುವು. ಹಾಗೆಯೇ ಜಗತ್ತೂ ವ್ಯವಹಾರ ದೃಷ್ಟಿಯಿಂದ ನಿಜವಾಗಿರುವುದು. ವ್ಯವಹಾರ ದೃಷ್ಟಿಯಿರುವವರೆಗೆ ಈ ಭೇದಗಳು ಇರುವುವು. ಸ್ವರೂಪಜ್ಞಾನವಾದ ಕೂಡಲೇ ಈ ಭೇದಗಳೆಲ್ಲ ಮಾಯವಾಗುವುವು. ಪರಮಾರ್ಥದ ಪ್ರಕಾರ ಪರಬ್ರಹ್ಮನೇ ನಿಜವಸ್ತುವಾದರೂ ವ್ಯವಹಾರ ಪ್ರಕಾರ ಸೃಷ್ಟಿಯುಂಟು, ಅದರ ಕರ್ತೃವಾದ ಈಶ್ವರನುಂಟು, ಸಕಲ ಪ್ರಪಂಚವುಂಟು, ಅಲ್ಲಿ ತೊಳಲುವ ಜೀವರಾಶಿಗಳುಂಟು. ಇವೆಲ್ಲವೂ ಮಾಯೆಯ ಪ್ರಭಾವದಿಂದ ನಿಜವಾಗಿ ತೋರುವುವು. ಶುದ್ಧನೂ ಸತ್ಯನೂ ಸರ್ವವ್ಯಾಪಿಯೂ ಆದ ಬ್ರಹ್ಮನೇ ನಿಜವಾದ ವಸ್ತು. ಜೀವಾತ್ಮನೂ ಪರಮಾತ್ಮನೇ ಅಹುದು. ಆದರೂ ಉಪಾಧಿ ಅಂಟಿಕೊಂಡಿರುವುದರಿಂದ ತನ್ನ ಸ್ವರೂಪ ಜ್ಞಾನವನ್ನು ಮರೆತು ಪ್ರಪಂಚ ಸತ್ಯವೆಂದು ಭ್ರಮಿಸುತ್ತಾನೆ. ಉಪಾಧಿಯಿಂದ ಬಿಡುಗಡೆಯಾದ ತಕ್ಷಣ ಈ ಭಿನ್ನಭಾವನೆ ಮಾಯವಾಗುವುದು. ಇದನ್ನೇ ಶಂಕರರು ಸತ್ತಾತ್ರೈವಿಧ್ಯವೆಂದು ಕರೆಯುತ್ತಾರೆ. ಇದು ವ್ಯಾವಹಾರಿಕ ಸತ್ತಾ, ಪ್ರಾತಿಭಾಸಿಕ ಸತ್ತಾ, ಪಾರಮಾರ್ಥಿಕ ಸತ್ತಾ ಎಂದು ಮೂರು ವಿಧ. ಇವನ್ನು ಜಾಗ್ರತ್, ಸ್ವಪ್ನ, ಸುಷುಪ್ತಾವಸ್ಥೆಗಳಿಗೆ ಹೋಲಿಸಬಹುದು. ಇವುಗಳಲ್ಲಿ ಸುಷುಪ್ತಾವಸ್ಥೆ ಪರಮಾರ್ಥ. ಇತರರು ಪರಮಾರ್ಥವೆನ್ನುವ ಪ್ರತ್ಯಕ್ಷವಾಗಿ ಗೋಚರವಾಗುವ ಪ್ರಪಂಚಾದಿಗಳು ಅಲ್ಲಿನ ವ್ಯವಹಾರಗಳೂ ಈ ದರ್ಶನದಲ್ಲಿ ವ್ಯವಹಾರಸತ್ತಾ ಆಗಿದೆ. ಈ ಮಾರ್ಗದಲ್ಲಿಯೇ ಇದ್ದು ವಿವೇಕಾದಿಗಳನ್ನು ಹೊಂದಿದವನು ಪ್ರಾತಿಭಾಸಿಕ ಅಥವಾ ವಿಚಾರಾವಸ್ಥೆಗೆ ಬರುತ್ತಾನೆ. ಈ ಮಾರ್ಗದಲ್ಲಿ ಎಲ್ಲವೂ ಅನಿರ್ವಚನೀಯ. ಸ್ವಪ್ನದಲ್ಲಿ ಕಂಡಂತೆ ಪ್ರಪಂಚಸ್ಥಿತಿ, ಧ್ಯಾನಾವಸ್ಥೆಯಲ್ಲಿ ಅದನ್ನು ಇಲ್ಲವಾಗಿಸಬೇಕು. ಇದರಲ್ಲಿ ಪರಿಣತನಾದವನು ಮುಂದಿನ ಪರಮಾವಸ್ಥೆಗೆ ಅಧಿಕಾರಿಯಾಗುತ್ತಾನೆ. ಇಲ್ಲಿ ಆತ್ಮವ್ಯತಿರಿಕ್ತವಾದುದೆಲ್ಲ ಮಾಯವಾಗುತ್ತದೆ. 'ನೇತಿ, ನೇತಿ' ಎಂಬುದರ ಅರ್ಥವೂ ಇದೇ. ಇದು ಜೀವನ್ಮುಕ್ತಿ ಮಾರ್ಗ. ಅದ್ವೈತದ ಮೋಕ್ಷದ ಕಲ್ಪನೆ ಅನ್ಯಾದೃಶವಾಗಿದೆ. ಅದೊಂದು ಬಗೆಯ ಆತ್ಮಸಾಕ್ಷಾತ್ಕಾರ. ಹೊಸದೇನನ್ನು ಸಾಧಿಸುವ ಪ್ರಶ್ನೆಯೇ ಇಲ್ಲಿ ಬರುವುದಿಲ್ಲ. ತಮ್ಮಲ್ಲಿಯೇ ಇದ್ದು ಮರೆಯಾದುದನ್ನು, ಆವರಣವನ್ನು ಕಳೆದು

ಡಾ॥ ಎನ್. ಅನಂತರಂಗಾಚಾರ್

ತಿಳಿದುಕೊಳ್ಳುವುದು ಸಾಕ್ಷಾತ್ಕಾರ. ವಿದ್ಯಾರಣ್ಯರ ಮಾತುಗಳಲ್ಲಿ ಹೇಳುವುದಾದರೆ ಇದುವರೆಗೆ ನಮ್ಮ ಮೈಮೇಲೆಯೇ ಇದ್ದು ಮರೆತು ಹೋಗಿದ್ದ ಬಂಗಾರದ ಒಡವೆಯನ್ನು ಮತ್ತೆ ಪಡೆಯುವುದು ಸಾಕ್ಷಾತ್ಕಾರ. ಅದು ಹೊರಗಿನಿಂದ ಪಡೆಯ ಬೇಕಾದ ವಸ್ತುವಲ್ಲ. ಒಳಗಿರುವುದರ ತಿಳುವಳಿಕೆ ಮಾತ್ರ. ಅದನ್ನು ಇಲ್ಲಿಯೇ ಪಡೆಯಬಹುದು. ಮತ್ತೊಂದು ಸ್ವಾರಸ್ಯವೇನೆಂದರೆ ಅದ್ವೈತದ ಪ್ರಕಾರ ಮೋಕ್ಷವು ಯಾವ ಕೆಲವೇ ಜನರಿಗೆ ಮೀಸಲಾಗಿರುವುದಲ್ಲ. ಸಮಸ್ತ ಜನರ ಅಜನ್ಮ ಸಿದ್ಧ ಹಕ್ಕು. ಇದಕ್ಕೆ ಯಾವ ಪಾತ್ರಾಪಾತ್ರ ತಾರತಮ್ಯವಿಲ್ಲ. ಬೇರೊಬ್ಬನು ಕೊಡುವ ವಸ್ತುವೂ ಅಲ್ಲ, ನಿಜಸ್ವರೂಪದ ಅರಿವು ಮಾತ್ರ. ಆದುದರಿಂದ ವಿಶ್ವವ್ಯಾಪಕತ್ವಗುಣವಿದೆ. ಇದಕ್ಕೂ ಮೇಲಾಗಿ ಮಾನಸಚಿಂತನೆಗೆ ಸೀಮಿತವಲ್ಲ. ಪಾರಮಾರ್ಥಿಕಕ್ಕೆ ಮಾರ್ಗದರ್ಶಕ. ಸಾಧನ ವಿಧಾನಗಳನ್ನು ನೈತಿಕ ಶ್ರೇಷ್ಠತೆಯ ಅವಶ್ಯಕತೆ ಯನ್ನು ಒತ್ತಿ ಒತ್ತಿ ಹೇಳುತ್ತದೆ. ಶ್ರವಣ ಮನನ ನಿಧಿಧ್ಯಾಸನದಿಂದ ಚಿತ್ತೈಕಾಗ್ರತೆಯನ್ನು ಪಡೆಯುವುದು ಈ ಸಿದ್ಧಾಂತದ ಪ್ರಕಾರ ಅನಿವಾರ್ಯ.

ಶಂಕರರು ತಮ್ಮ ಸಿದ್ಧಾಂತ ಸ್ಥಾಪನೆಗಾಗಿ ಅನೇಕ ಪ್ರಾಚೀನ ಗ್ರಂಥಗಳಿಗೆ ಭಾಷ್ಯಗ್ರಂಥಗಳನ್ನು ರಚಿಸಿದುದಲ್ಲದೆ, ಸ್ವತಂತ್ರಗ್ರಂಥಗಳನ್ನೂ ನಿರ್ಮಿಸಿದರು- ಇವರ ಅವತಾರಕಾಲದಲ್ಲಿ ಬೌದ್ಧಮತವು ಕ್ಷೀಣದೆಶೆಯಲ್ಲಿದ್ದರೂ ಜೈನ ಮತವು ಬಲವಾಗಿಯೇ ಇದ್ದಿತು. ವೇದಕರ್ಮ ಗಳು ದೂಷಿಸಲ್ಪಡುತ್ತಿದ್ದವು. ಬೌದ್ಧರ ನಾಸ್ತಿಕತ್ವ ವನ್ನು ಖಂಡಿಸಲು ಮೀಮಾಂಸಕರು ವೇದಕರ್ಮ ಗಳ ಮಹಾತ್ಮೆಯನ್ನು ಪ್ರಚಾರ ಪಡಿಸುತ್ತಿದ್ದರು. ಇಂತಹ ಕಾಲದಲ್ಲಿ ಶಂಕರಾಚಾರ್ಯರು ಅವತರಿಸಿ ಆಸ್ತಿಕ ಸಂಪ್ರದಾಯವನ್ನು ಸ್ಥಾಪನೆಗೊಳಿಸಿದರು.

ಅದ್ವೈತಸಿದ್ಧಾಂತದ ಸಾಮಾನ್ಯ ಸ್ವರೂಪ ವನ್ನು ಈ ರೀತಿ ಸಂಗ್ರಹಿಸಬಹುದು:– ಈ ಸಿದ್ಧಾಂತದಲ್ಲಿ ಜ್ಞಾನಮಾರ್ಗಕ್ಕೆ ಆದ್ಯತೆಯನ್ನು ಕೊಟ್ಟಿದೆ. ಆತ್ಮೈಕ್ಯಜ್ಞಾನ ಮೋಕ್ಷಕ್ಕೆ ಕಾರಣ. ಶ್ರವಣ ಮನನ ನಿಧಿಧ್ಯಾಸನಗಳಿಂದ ಜೀವನ್ಮು ಕ್ತಿಯುಂಟಾಗುತ್ತದೆ. ಇದು ಬೌದ್ಧಧರ್ಮದ ಹಲವಾರು ಪ್ರಕ್ರಿಯೆಗಳನ್ನನುಸರಿಸಿದ್ದರೂ ಅದಕ್ಕೆ ಪ್ರತಿಪಕ್ಷವಾಗಿದೆ. ಬೌದ್ಧದರ್ಶನ ನೈರಾತ್ಮ್ಯ ದರ್ಶನ. ಬ್ರಹ್ಮವನ್ನುಳಿದು ವಿಶ್ವವು ಮಿಥ್ಯೆ ಎಂಬ ವಾದದಿಂದ, ಬೌದ್ಧ ದರ್ಶನವನ್ನು ಇದು ಖಂಡಿ ಸಿದೆ. ಬ್ರಹ್ಮವಸ್ತು ಕಾರಣಬ್ರಹ್ಮ, ಕಾರ್ಯ ಬ್ರಹ್ಮ, ಅಥವಾ ಪರ ಅಪರ ಎಂದು ಎರಡು ವಿಧ. ಪ್ರಪಂಚಕ್ಕೆ ಮೂಲ ಕಾರಣವಾದ ಅವಿದ್ಯೆ ಯಿಂದ ವಿಶಿಷ್ಟನಾದ ಬ್ರಹ್ಮವಸ್ತು ಈಶ್ವರನಾ ಗುತ್ತಾನೆ. ಈ ಈಶ್ವರನೇ ಮಾಯಾ ವಿಶಿಷ್ಟನಾಗಿ ಜೀವನಾಗುತ್ತಾನೆ. ಈ ಮೂಲಾವಿದ್ಯೆಗೆ ಆಶ್ರ ಯವಾದ ಶುದ್ಧ ಚೈತನ್ಯವೇ ಈಶ್ವರ. ಅದ್ವೈ ತದಲ್ಲಿ ಪ್ರತ್ಯಕ್ಷ ಅನುಮಾನ, ಶಬ್ದ, ಅರ್ಥಾಪತ್ತಿ ಅನುಪಲಬ್ಧಿ ಎಂಬ ಆಯ್ದು ಪ್ರಮಾಣಗಳುಂಟು.

ಮೋಕ್ಷಕ್ಕೆ ಪ್ರಯತ್ನ ಅವಶ್ಯಕ. ಮೊದಲು ಸಾಧನಚತುಷ್ಟಯಸಂಪಾದನೆಯಾಗಬೇಕು. ಸಹ ಜವಾಗಿ ಮೋಕ್ಷ ಪ್ರಾಪ್ತವಾಗಿದ್ದರೂ ಅಜ್ಞಾ ನದ ಕಾರಣ ಅದು ತನಗೆ ಪ್ರಾಪ್ತವಾಗಿಲ್ಲವೆಂದು ಆತ್ಮ ತಿಳಿಯುತ್ತಾನೆ. ಇದನ್ನು ಸಾಧಿಸಲು ಪ್ರಯತ್ನ ಬೇಕು. ಬ್ರಹ್ಮೈಕ್ಯತ್ವದ ಅನುಭ ವವೇ ಶ್ರುತಿಯ ಗುರಿ. 'ಅಹಂ ಬ್ರಹ್ಮಾಸ್ಮಿ' 'ತತ್ತ್ವಮಸಿ' ಮೊದಲಾದ ಮಹಾವಾಕ್ಯಗಳ ಅನುಭವ ಗುರೂಪದೇಶದಿಂದಾಗಬೇಕು. ಕಾರಣ ವಾಕ್ಯಗಳೂ ನಿರ್ವಿಶೇಷ ಪರಬ್ರಹ್ಮವನ್ನೇ ಹೇಳು ತ್ತವೆ. ಸಗುಣವಾಕ್ಯಗಳಿಂದ ಉಪಾಸನೆಗೆ ದಾರಿ ಯಾಗಿ ಚಿತ್ತೈಕಾಗ್ರತೆಯು ಲಭಿಸುತ್ತದೆ. ಕರ್ಮ ಯೋಗದಿಂದ ಚಿತ್ತಶುದ್ಧಿ, ಭಕ್ತಿಯಿಂದ ಚಿತ್ತೈ ಕಾಗ್ರತೆ. ಜ್ಞಾನದಿಂದ ಆತ್ಮೈಕತ್ವಾನುಭವ – ಇವು ಸಾಧನ ಸಾರಾಂಶ. ಈ ದರ್ಶನದ ಮುಖ್ಯಾಂಶಗಳನ್ನು ನಾಲ್ಕು ಶಬ್ದಗಳಲ್ಲಿ ಹೇಳ ಬಹುದು. ನಿರ್ಗುಣ ಬ್ರಹ್ಮ, ವಿವರ್ತವಾದ, ಜ್ಞಾನಯೋಗ, ಜೀವನ್ಮುಕ್ತಿ – ಎಂಬುವು ಅವು. ಮುಂದಿನ ಶ್ಲೋಕವು ಈ ದರ್ಶನದ ಸಾರ ಸಂಗ್ರಹವಾಗಿದೆ–

ಬ್ರಹ್ಮೈಕಂ ಪರಮಾರ್ಥಸತ್
ತದಿತರನ್ಮಾಯಾಮಯತ್ವಾನ್ಮೃಷಾ
ಬ್ರಹ್ಮೈವೇಕಮುಪಾಧಿ
ಚಿಂತಿತಮತೋ ಜೀವೇಶಭಾವಂ ಗತಂ
ಭ್ರಾಂತಿಸ್ಸಂಸೃತಿರಸ್ಯ ತತ್ರ ಶಮನಂ
ಮುಕ್ತಸ್ತದತ್ಯಾತ್ಮನಃ
ಬ್ರಹ್ಮೈಕ್ಯಾದಗಮಾತ್
ಶ್ರುತಿಶ್ರವಣಜಾದಿತ್ಯಾಹುರದ್ವೈತಿನಃ ॥

(ಬ್ರಹ್ಮವೊಂದೇ ವಸ್ತು. ಇದಕ್ಕೆ ಬೇರೆಯಾಗಿರುವ ವಸ್ತುಗಳಾವುವೂ ಇಲ್ಲ. ಒಂದೇ ಎಂದಂತೆ ಸಜಾ ತೀಯವಾದ ಅಥವಾ ವಿಜಾತೀಯವಾದ ವಸ್ತು ವಾವುದೂ ಇಲ್ಲ. ಈ ಬ್ರಹ್ಮನಿಗೆ ಯಾವ ಗುಣ ಗಳೂ ಇಲ್ಲ. ಬ್ರಹ್ಮನೇ ಆತ್ಮನೆಂದು ಕರೆಯಲ್ಪ ಡುವುದು. ಬೇರೆ ಜೀವಾತ್ಮನಾರೂ ಇಲ್ಲ. ಆತ್ಮನಿ ಗಿಂತ ಭಿನ್ನವಾದ ಆತ್ಮನೂ ಇಲ್ಲ.)

ಶಂಕರಾಚಾರ್ಯರು 'ಛಾಂದೋಗ್ಯ' 'ಬೃಹ ದಾರಣ್ಯಕ' 'ತೈತ್ತರೀಯ' 'ಐತ್ತರೇಯ' 'ಶ್ವೇತಾ ಶ್ವತರ', 'ಕೇನ', 'ಕಠ', 'ಈಶ', 'ಪ್ರಶ್ನ',

'ಮುಂಡಕ', 'ಮಾಂಡೂಕ್ಯ', 'ಅಥರ್ವಶಿಖಾ' 'ಅಥರ್ವಶಿರಸ್', ಎಂಬ ಉಪನಿಷತ್ತುಗಳಿಗೂ ಮತ್ತು ಬ್ರಹ್ಮಸೂತ್ರಗಳಿಗೂ ಭಾಷ್ಯಗಳನ್ನು ರಚಿಸಿದ್ದಾರೆ. ಇವು ಅದ್ವೈತ ದರ್ಶನದ ಪರಮ ತತ್ತ್ವಗಳನ್ನು ಪ್ರತಿಪಾದಿಸುವುವು. 'ಉಪದೇಶ ಸಾಹಸ್ರೀ', 'ವಿವೇಕ ಚೂಡಾಮಣಿ', 'ಪ್ರಶ್ನೋತ್ತರ ಮಾಲಿಕಾ' – ಇವು ಅವರ ಮತ್ತಿತರ ಸಿದ್ಧಾಂತ ಗ್ರಂಥಗಳು. 'ದಕ್ಷಿಣಾಮೂರ್ತಿ ಸ್ತೋತ್ರ', 'ಹರಿಮೀಡೇ', 'ಭಜಗೋವಿಂದ ಸ್ತೋತ್ರ', 'ಆನಂದಲಹರಿ', 'ಸೌಂದರ್ಯ ಲಹರಿ'– ಮುಂತಾದುವು ಭಕ್ತಿ ಪ್ರಧಾನ ಸ್ತೋತ್ರಗಳು. 'ಅಪ್ತವಜ್ರಸೂಚಿ' 'ಆತ್ಮಬೋಧ', 'ಮೋಹಮುದ್ಗರ', 'ದಶಶ್ಲೋಕಿ', 'ಅಪರೋಕ್ಷಾನುಭೂತಿ', 'ವಿಷ್ಣುಸಹಸ್ರನಾಮ' ಮತ್ತು 'ಸನತ್ಸುಜಾತೀಯ'ಗಳ ಭಾಷ್ಯಗಳು ಅವರ ಇತರ ಗ್ರಂಥಗಳು. ಇವುಗಳಲ್ಲಿ ಕಂಡುಬರುವ ಉಕ್ತಿಕೌಶಲ್ಯವೂ, ಶೈಲಿಯ ಔನ್ನತ್ಯವೂ ಅದ್ಭುತವಾಗಿವೆ ವೇದಪ್ರತಿಪಾದಿತವಾದ ತತ್ತ್ವ ಮತ್ತು ಅಭಿಪ್ರಾಯಗಳಿಗೆ ನೇರ ವಿರೋಧವಾದ ಅಂಶಗಳು ಕೆಲವು ಆಗಮಗಳಲ್ಲಿ ಕಂಡು ಬಂದುದರಿಂದ ಆಗಮಗಳ ಪ್ರಾಮಾಣ್ಯವನ್ನು ಇವರು ಅಂಗೀಕಾರ ಮಾಡಲಿಲ್ಲ.

ಶಂಕರರಾದ ಮೇಲೆ ಕೆಲವು ಮತದಂತೆ ಮಂಡನ ಮಿಶ್ರರೊಡನೆ ಐಕ್ಯತೆಯನ್ನು ಸೂಚಿಸುವ ಸುರೇಶ್ವರಾಚಾರ್ಯರು 'ಬೃಹದಾರಣ್ಯೋಪನಿಷದ್ವಾರ್ತಿಕ' ಮತ್ತು 'ನೈಷ್ಕರ್ಮ್ಯಸಿದ್ಧಿ' ಎಂಬ ಗ್ರಂಥಗಳನ್ನೂ ರಚಿಸಿದ್ದಾರೆ. ಶಂಕರರ 'ಬ್ರಹ್ಮಸೂತ್ರಭಾಷ್ಯ'ಕ್ಕೆ ಅವರ ಶಿಷ್ಯರುಗಳಾದ ಪದ್ಮಪಾದ, ವಾಚಸ್ಪತಿ ಮಿಶ್ರ, ಅನುಭೂತಿ ಸ್ವರೂಪಾಚಾರ್ಯ, ಆನಂದಗಿರಿ, ಚಿತ್ಸುಖರು ಕ್ರಮವಾಗಿ 'ಪಂಚಪಾದಿಕಾ', 'ಭಾಮತಿ', 'ಪ್ರಕಟಾರ್ಥವಿವರಣ', 'ನ್ಯಾಯನಿರ್ಣಯ' ಮತ್ತು 'ಭಾಷ್ಯ ಪ್ರಕಾಶಿಕಾ' ಎಂಬ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಅಮಲಾನಂದರು (ಕ್ರಿ. ಶ. ೧೩ ನೆಯ ಶತಮಾನ) ತಮ್ಮ 'ವೇದಾಂತ ಕಲ್ಪತರು' ಎಂಬ ಕೃತಿಯಲ್ಲಿ 'ಭಾಮತಿ'ಗೆ ವಿವೃತಿಯನ್ನು ಬರೆದಿದ್ದಾರೆ. ವೇದಾಂತ ಕಲ್ಪತರುವಿಗೆ ಅಪ್ಪಯ್ಯದೀಕ್ಷಿತರು 'ಪರಿಮಳ'ವೆಂಬ ಹೆಸರಿನಲ್ಲಿ ವಾರ್ತಿಕವನ್ನು ರಚಿಸಿದರು. 'ವೇದಾಂತ ಕಲ್ಪತರು'ವಿಗೆ ಲಕ್ಷ್ಮೀ ನರಸಿಂಹರೆಂಬುವರು 'ಆಭೋಗ' ಎಂಬ ಟೀಕೆಯನ್ನು ಸಿದ್ಧಪಡಿಸಿದರು. ಈ ವಿತರಣಾತ್ಮ ಕೃತಿಗಳಿಗೆ 'ಭಾಮತಿ ಪರಂಪರೆ' ಎಂಬ ಅಭಿಧಾನವಿದೆ.

ಹಾಗೆಯೇ ಮತ್ತೊಂದು ಸಂಪ್ರದಾಯ ಪರಂಪರೆಯು ಜೊತೆಯಲ್ಲಿಯೇ ಬೆಳೆದು ಬಂದಿದೆ. ಶಂಕರರ ನೇರ ಶಿಷ್ಯರಾದ ಪದ್ಮಪಾದರ ಪಂಚಪಾದಿಕಾ' ಎಂಬ ಟೀಕೆಗೆ ಪ್ರಕಾಶಾತ್ಮನ್ ಎಂಬುವರು 'ಪಂಚಪಾದಿಕಾ ವಿವರಣ' ಎಂಬ ವ್ಯಾಖ್ಯಾನವನ್ನು ರಚಿಸಿದರು. ಈ ಕೃತಿಯಿಂದ ವಿವರಣ ಸಂಪ್ರದಾಯವು ಬಳಕೆಗೆ ಬಂತು. ಇದರ ಸಂಪ್ರದಾಯವನ್ನು ವಿದ್ಯಾರಣ್ಯರು ತಮ್ಮ 'ವಿವರಣಾ ಪ್ರಮೇಯ ಸಂಗ್ರಹ' ದಲ್ಲಿ ಕ್ರೋಢೀಕರಿಸಿದುದಲ್ಲದೆ 'ಪಂಚದಶಿ' ಮತ್ತು 'ಜೀವನ್ಮುಕ್ತಿ ವಿವೇಕ' ಎಂಬ ಕೃತಿಗಳನ್ನೂ ರಚಿಸಿದರು.

ಶಂಕರರ 'ಭಗವದ್ಗೀತಾಭಾಷ್ಯ' ಮತ್ತು 'ಉಪನಿಷದ್ಭಾಷ್ಯ'ಗಳಿಗೆ ಆನಂದಗಿರಿಯವರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಈಗ ಇವು ಉಪಲಬ್ಧವಲ್ಲ. ವಿಮುಕ್ತಾತ್ಮರ 'ಇಷ್ಟಸಿದ್ಧಿ'ಯು ಅದ್ವೈತಪಂಥಕ್ಕೆ ಸೇರಿದ ವಾದಾತ್ಮಕಗ್ರಂಥ ವಿಮುಕ್ತಾತ್ಮರ ಕಾಲ ೮೫೦ ರಿಂದ ೧೦೫೦ ಇರಬಹುದು. ಸರ್ವಜ್ಞಾತ್ಮರ (ಸು. ೯೫೦) 'ಸಂಕ್ಷೇಪ ಶಾರೀರಕ'ವು ಶಂಕರ ಭಾಷ್ಯದ ಸಂಗ್ರಹ. ಇವರೇ 'ಪ್ರಮಾಣಲಕ್ಷಣ' ಮತ್ತು 'ಪಂಚಪ್ರಕ್ರಿಯ' ಎಂಬ ಮತ್ತೆರಡು ಗ್ರಂಥಗಳನ್ನೂ ರಚಿಸಿದ್ದಾರೆ. ಕ್ರಿ. ಶ ೧೨೦೦ ರಲ್ಲಿ ಪ್ರಕಾಶಾತ್ಮರು 'ನ್ಯಾಯಸಂಗ್ರಹ'ವೆಂಬ 'ಬ್ರಹ್ಮಸೂತ್ರದ ಮತ್ತೊಂದು ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದೇ ಕಾಲದಲ್ಲಿ 'ನೈಷಧೀಯ ಚರಿತೆ'ಯ ಕರ್ತೃವಾದ ಶ್ರೀ ಹರ್ಷರು ನ್ಯಾಯ ಸಿದ್ಧಾಂತ ಖಂಡನಕ್ಕಾಗಿಯೂ ಅದ್ವೈತ ಮಂಡನಕ್ಕಾಗಿಯೂ 'ಖಂಡನ ಖಂಡಖಾದ್ಯ' ವೆಂಬ ವಾದಾತ್ಮಕ ಗ್ರಂಥವನ್ನು ರಚಿಸಿದರು. ಚಿತ್ಸುಖರು (೧೨೫೦) 'ಖಂಡನ ಖಂಡ ಖಾದ್ಯ' 'ಬ್ರಹ್ಮಸಿದ್ಧಿ' ಮತ್ತು 'ನೈಷ್ಕರ್ಮ್ಯಸಿದ್ಧಿ'ಗಳಿಗೆ ವ್ಯಾಖ್ಯಾನಗಳನ್ನೂ 'ತತ್ತ್ವದೀಪಿಕೆ'ಯೆಂಬ ಸ್ವತಂತ್ರ ಗ್ರಂಥವನ್ನೂ ರಚಿಸಿದ್ದಾರೆ. 'ತತ್ತ್ವದೀಪಿಕೆ'ಯು ದ್ವೈತಮತಾನುಯಾಯಿಗಳಾದ ವ್ಯಾಸತೀರ್ಥರಿಂದ ಅವರ 'ನ್ಯಾಯಾಮೃತ'ದಲ್ಲಿ ಖಂಡಿತವಾಗಿದೆ. ಮಾಧವಾಚಾರ್ಯರಿಂದ ೧೪ ನೆಯ ಶತಮಾನದಲ್ಲಿ 'ವಿವರಣ ಪ್ರಮೇಯ ಸಂಗ್ರಹ', 'ಪಂಚದಶಿ', 'ಜೀವನ್ಮುಕ್ತಿವಿವೇಕ' 'ವೈಯಾಸಿಕ್ಯನ್ಯಾಯಮಾಲಾ' ಎಂಬ ಗ್ರಂಥಗಳು ರಚಿತವಾಗಿವೆ. ಕೊನೆಯ ಗ್ರಂಥದ ಕೆಲವು ಭಾಗಗಳು ಭಾರತೀತೀರ್ಥರಿಂದಲೂ ರಚಿತವಾಗಿದೆಯೆಂದು ಪ್ರತೀತಿ. ೧೫ ನೆಯ ಶತಮಾನದಲ್ಲಿದ್ದ ಸದಾನಂದರಿಂದ 'ವೇದಾಂತಸಾರ'ವೆಂಬ ಬಹು ಉಪಯುಕ್ತವಾದ ಗ್ರಂಥವೊಂದು ರಚಿತವಾಗಿದೆ. ಇದು ಅದ್ವೈತ ಮತಕ್ಕೆ ಸೇರಿದ ಉತ್ತಮ ಆಧ್ಯಾತ್ಮಿಕ ವಿಚಾರವಾದ ಗ್ರಂಥ. ೧೭ ನೆಯ ಶತಮಾನದಲ್ಲಿದ್ದ ಧರ್ಮರಾಜಾಧ್ವರಿಯಿಂದ 'ಅದ್ವೈತಪರಿಭಾಷಾ' ಅಥವಾ 'ವೇದಾಂತ ಪರಿಭಾಷಾ' ಎಂಬ ಗ್ರಂಥವು ರಚಿತವಾಗಿದೆ. ಮಧುಸೂದನಸರಸ್ವತಿಯು ವ್ಯಾಸತೀರ್ಥರ 'ನ್ಯಾಯಾಮೃತ'ದ ಖಂಡನಾತ್ಮಕವಾದ 'ಅದ್ವೈತಸಿದ್ಧಿ' ಎಂಬ ಗ್ರಂಥವನ್ನು ರಚಿಸಿದ್ದಾರೆ, (೧೭ ನೇ ಶತಮಾನ) ರಾಮಾಚಾರ್ಯರೆಂಬುವರು 'ನ್ಯಾಯಾಮೃತ'ಕ್ಕೆ 'ತರಂಗಿಣಿ' ಎಂಬ ವ್ಯಾಖ್ಯಾನವನ್ನು ರಚಿಸಿ 'ಅದ್ವೈತಸಿದ್ಧಿ'ಯನ್ನು ಖಂಡಿಸಿದ್ದಾರೆ. ಇದಕ್ಕೆ ಉತ್ತರವಾಗಿ ಬ್ರಹ್ಮಾನಂದರು 'ಗೌಡ ಬ್ರಹ್ಮಾನಂದೀಯ' ಎಂಬ ವ್ಯಾಖ್ಯಾನವನ್ನು ರಚಿಸಿ 'ಅದ್ವೈತಸಿದ್ಧಿ'ಯ ಮಂಡನ ಗ್ರಂಥವನ್ನು ರಚಿಸಿದ್ದಾರೆ. ಮಧುಸೂದನ ಸರಸ್ವತಿಯು ಶಂಕರರ 'ದಶಶ್ಲೋಕಿ'ಗೆ 'ಸಿದ್ಧಾಂತ ಬಿಂದು' ಎಂಬ ಭಾಷ್ಯವನ್ನು, 'ಗೀತಾ ಭಾಷ್ಯ'ಕ್ಕೆ 'ಗೂಢಾರ್ಥದೀಪಿಕಾ' ಎಂಬ ವ್ಯಾಖ್ಯಾನವನ್ನೂ 'ಪ್ರಸ್ಥಾನಭೇದ'ವೆಂಬ ವಿವಿಧ ಪಂಥಗಳ ವಿಮರ್ಶಾತ್ಮಕ ಗ್ರಂಥವನ್ನು ರಚಿಸಿದ್ದಾರೆ. ಅಪ್ಪಯ್ಯ ದೀಕ್ಷಿತರು ಅದ್ವೈತಸಿದ್ಧಾಂತ ಪ್ರತಿಪಾದಕವಾದ 'ಸಿದ್ಧಾಂತಲೇಶಸಂಗ್ರಹ', ಬ್ರಹ್ಮಸೂತ್ರ ವ್ಯಾಖ್ಯಾನರೂಪವಾದ 'ನ್ಯಾಯರಕ್ಷಾಮಣಿ', ಅಮಲಾನಂದರ 'ಕಲ್ಪತರು'ವಿನ ವ್ಯಾಖ್ಯಾರೂಪವಾದ 'ಪರಿಮಳ', ಅದ್ವೈತ ಸಿದ್ಧಾಂತ ಪ್ರತಿಪಾದಕವಾದ 'ನ್ಯಾಯಮಂಜರಿ' ಎಂಬ ಕೃತಿಗಳನ್ನು ರಚಿಸಿದ್ದಾರೆ. ಅವರ ಶಿಷ್ಯರಾದ ಭಟ್ಟೋಜಿ ದೀಕ್ಷಿತರು 'ತತ್ತ್ವ ಕೌಸ್ತುಭ'ವೆಂಬ ತತ್ತ್ವಪ್ರತಿಪಾದಕ ಗ್ರಂಥವನ್ನು ರಚಿಸಿದ್ದಾರೆ. ಅನ್ನಂಭಟ್ಟರು (೧೭೦೪) ತಮ್ಮ ಮಿತಾಕ್ಷರದಲ್ಲಿ ಬ್ರಹ್ಮಸೂತ್ರವ್ಯಾಖ್ಯಾನವನ್ನು ರಚಿಸಿದ್ದಾರೆ. ಇವರಲ್ಲದೆ ಈ ಶಾಖೆಯಲ್ಲಿ ಅದ್ವೈತಾನಂದರ 'ಬ್ರಹ್ಮವಿದ್ಯಾಭರಣ', ಗೋವಿಂದಾನಂದರ 'ರತ್ನಪ್ರಭಾ', ಸದಾನಂದರ 'ವೇದಾಂತಸಾರ' 'ಸುಬೋಧಿನೀ' ಮತ್ತು 'ವಿದ್ವನ್ಮನೋರಂಜಿನಿ' ಎಂಬ 'ವೇದಾಂತಸಾರ'ದ ಟಿಪ್ಪಣಿಗಳೂ, ಸದಾನಂದರ 'ಅದ್ವೈತ ಬ್ರಹ್ಮಸಿದ್ಧಿ', ಲಕ್ಷ್ಮೀಧರರ 'ಅದ್ವೈತ ಮಕರಂದ' ಪ್ರಕಾಶಾನಂದರ 'ಸಿದ್ಧಾಂತ ಮುಕ್ತಾವಳಿ' – ಮುಂತಾದ ಅನೇಕ ಕೃತಿಗಳಿವೆ. ಇವೆಲ್ಲವೂ ಪ್ರಾಚೀನಾಚಾರ್ಯರ ಉಕ್ತಿಗಳ ಆಧಾರದ ಮೇಲೆ ರಚಿತವಾಗಿವೆ.

ಅದ್ವೈತ ಮತದ ವಿಷಯವಾಗಿ ಕನ್ನಡದಲ್ಲಿ ನಿಜಗುಣ ಶಿವಯೋಗಿಗಳು 'ಕೈವಲ್ಯ ಪದ್ಧತಿ' 'ಪರಮಾನುಭವ ಬೋಧೆ' 'ಪರಮಾರ್ಥಗೀತೆ' 'ಅನುಭವಸಾರ' – ಎಂಬ ಗ್ರಂಥಗಳನ್ನೂ ರಚಿಸಿದ್ದಾರೆ. ರಂಗನಾಥರೆಂಬುವರಿಂದ ಇದೇ ವಿಷಯವಾಗಿ 'ಅನುಭವಾಮೃತ' ಮತ್ತು 'ವಿವೇಕಸಾರ' ಎಂಬ ಗ್ರಂಥಗಳ ರಚಿತವಾಗಿವೆ. ★

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಪಯಸ್ಸೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಶ್ರೀ ನೃಸಿಂಹ ಸಂದರ್ಶನ

ಯಸ್ಮಾದಭವ ದ್ಭಕ್ತಜನಾರ್ತಿಹಂತಃ
ಪಿತೃತ್ವಮನ್ಯೇಷು ಅವಿಚಾರ್ಯ ತೂರ್ಣಂ ।
ಸ್ತಂಭೇಽವತಾರಃ ತವಾನನ್ಯಲಭ್ಯಂ
ಲಕ್ಷ್ಮೀನೃಸಿಂಹಂ ಶರಣಂ ಪ್ರಪದ್ಯೇ ॥

ಹಿರಣ್ಯಕಶಿಪುವು ದಾನವಕುಲಾಗ್ರೇಸರನಾಗಿ ಇಂದ್ರಾದಿದೇವತೆಗಳನ್ನೆಲ್ಲಾ ಗೆದ್ದು ಪ್ರಚಂಡನಾಗಿದ್ದಾನೆ. ಲೋಕೋತ್ತರವಾದ ತಪಸ್ಸನ್ನಾಚರಿಸಿ, ಪಿತಾಮಹನನ್ನೊಲಿಸಿ, ಅವನ ಸೃಷ್ಟಿಯಲ್ಲಿರುವ ಯಾವ ಚರಾಚರ ವಸ್ತುಗಳಿಂದಲೂ ಅವನಿಗೆ ಪ್ರಾಣಹಾನಿಯಾಗಕೂಡದು, ನೆಲದ ಮೇಲಾಗಲಿ ಆಕಾಶದಲ್ಲಾಗಲಿ ಮರಣಸಂಭವಿಸಕೂಡದು, ಪ್ರಪಂಚದಲ್ಲಿ ವಿದಿತವಾಗಿರುವ ಯಾವ ಆಯುಧಗಳಿಂದಲಾಗಲಿ ಹಾನಿಯೊದಗಬಾರದೆಂದು ತನ್ನ ಜಾಣ್ಮೆಯನ್ನೆಲ್ಲಾ ಉಪಯೋಗಿಸಿ ವರವನ್ನು ಪಡೆದಿದ್ದನು. ಈ ಕಾರಣದಿಂದ ಉಬ್ಬಿಹೋಗಿ ರಾಜಸ ತಾಮಸ ಗುಣೋನ್ಮತ್ತನಾಗಿ, "ಈಶೋಽಹಂ ಸರ್ವ ಲೋಕಸ್ಯ" ಎಂದೂ, "ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ" ಎಂದೂ ಹಿಗ್ಗಿದ್ದಾನೆ. ಮೂರುಲೋಕಗಳನ್ನು ಜಯಿಸಿ, ಇಂದ್ರಾದಿ ದೇವತೆಗಳನ್ನು ಪದಚ್ಯುತಗೊಳಿಸಿ, ಈ ಪ್ರಪಂಚದಲ್ಲಿ ತಾನೇ ದೊಡ್ಡವನೆಂದು ಡಂಗುರ ಹೊಡೆಸಿದ್ದಾನೆ, ಎಲ್ಲಾ ಪೂಜೆಪುರಸ್ಕಾರಗಳೂ ತನಗೇ ಸಲ್ಲಬೇಕೆಂದೂ ಅಪ್ಪಣೆಮಾಡಿದ್ದಾನೆ, ತನಗಿಂತ ಪರವಸ್ತು ಲೋಕದಲ್ಲಿಲ್ಲವೆಂದು ಮಾನ್ಯಮಾಡಿ ಬೇರೆ ದೇವದೇವತೆಗಳ ವಿಚಾರವಾಗಿ ಯಾರೂ ಕಾಯಾವಾಚಾಮನಸಾ ಆಡಕೂಡದು ಬೋಧಿಸಕೂಡದು, ಪೂಜಿಸಕೂಡದು, ನಂಬಕೂಡದು ಎಂದು ಕಟ್ಟಾಜ್ಞೆಯನ್ನು ಮಾಡಿದ್ದಾನೆ. ಪ್ರಪಂಚ ನಡುಗಿ ಹೋಗಿದೆ. ಬ್ರಹ್ಮರುದ್ರೇಂದ್ರಾದಿಗಳೆಲ್ಲಾ ನಡುಗಿಹೋಗಿದ್ದಾರೆ. ಶ್ರೀಹರಿಯೇ ಕಾಪಾಡಬೇಕೆಂದು ತಪಸ್ಸು ಮಾಡುತ್ತಿದ್ದಾರೆ. ಹಿರಣ್ಯಕಶಿಪುವು ಲೋಕಕಂಟಕನಾಗಿದ್ದಾನೆ.

ದೇವತಾದಿಗಳ ತಪಃ ಪ್ರಭಾವದಿಂದ ಆರ್ತತ್ರಾಣಪರಾಯಣನಾದ ಶ್ರೀ ವಿಷ್ಣುವು ಹಿರಣ್ಯಕಶಿಪುವಿಗೆ ಅಭೂತಪೂರ್ವವಾದ ಒಂದು ಪುಂಸಂತಾನವನ್ನು ಕರುಣಿಸಿದನು. ಮಗುವಿನ ಮುಖವನ್ನು ನೋಡುತ್ತಿದ್ದಂತೆಯೇ ಯಾರಿಗಾದರೂ ತುಂಬಾ ಸುಖಾನುಭವವಾಗುತ್ತಿತ್ತು. ದಾನವೇಂದ್ರನು ಸುಪುತ್ರಲಾಭದಿಂದ ಆನಂದಿತನಾಗಿ ಮಗನಿಗೆ ಪ್ರಹ್ಲಾದನೆಂದು ಹೆಸರಿಟ್ಟನು. ಈ ಮಗುವಿನ ಅವತಾರದಿಂದ ಬ್ರಹ್ಮೇಂದ್ರಾದಿ ದೇವತೆಗಳೂ ಸಂತೋಷಪಟ್ಟರು. ತಮಗೆ ವಿಮುಕ್ತಿಯನ್ನೂ ಸ್ವಾತಂತ್ರ್ಯವನ್ನೂ ತಂದುಕೊಡುವ ಮಗುವಿಗೆ ಪ್ರಹ್ಲಾದನೆಂಬ ಹೆಸರು ಅನ್ವರ್ಥವೆಂದು ಅನುಮೋದಿಸಿದರು. ಮಗು ಬೆಳೆಯಿತು, ವಿದ್ಯಾಭ್ಯಾಸದ ವಯಸ್ಸಾಯಿತು. ದಾನವ ಚಕ್ರವರ್ತಿಯು ತನ್ನ ಆಸ್ಥಾನದ ಆಚಾರ್ಯರುಗಳಿಗೆ ತನ್ನ ಮತದಂತೆ ವಿದ್ಯಾಭ್ಯಾಸ ಮಾಡಿಸಲು ಒಪ್ಪಿಸಿದ. ಭಯಭೀತಿಗಳಿಂದ, ರಾಜನ ಆದೇಶದಂತೆ, ಶಿಶುವಿಗೆ ವಿದ್ಯಾದಾನ ಮಾಡಲು ಗುರುಗಳು ಯತ್ನಿಸಿದರು. ಆದರೆ ಗುರುಗಳ ಪಾಠ ಗುರುಗಳಿಗೇ ಆಯಿತು, ರಾಜಾಜ್ಞೆಯ ಮಾತು ಅವರುಗಳಿಗೇ ಅನ್ವಯಿಸಿತು. ಮಗುವು ತಾಯಿಯ ಗರ್ಭದಲ್ಲಿದ್ದಾಗಲೇ ಲೋಕಗುರುವಾದ ನಾರದರಿಂದ ಉಪದೇಶಹೊಂದಿ ಶಿಶುವು ವೈಷ್ಣವ ಪಿಂಡವಾಗಿತ್ತು. ಹುಟ್ಟಿದ ಮೇಲೆ ಮಗುವು ಪರಮವೈಷ್ಣವನಾಗಿ ಬೆಳೆದ, ಹರಿನಾಮಸ್ಮರಣೆಯಲ್ಲಿ ಸದಾ ಮಗ್ನನಾದ. 'ಇಹಪರಗಳೆರಡೂ ಹರಿಯ ಅಧೀನ, ಅವನ ನಾಮದ ಸ್ಮರಣೆಯೇ ಮುಕ್ತಿಗೆ ದ್ವಾರ, ಅದೇ ಮನುಜ ಜನ್ಮದ ಕರ್ತವ್ಯ, ಶ್ರೀಹರಿಯು ಎಲ್ಲೆಲ್ಲೂ ಇದ್ದಾನೆ, ಎಲ್ಲಾ ಪ್ರಕಾರದಲ್ಲೂ ಇದ್ದಾನೆ. ಎಲ್ಲಾ ಅವನ ಸಂಕಲ್ಪದಂತೆಯೇ ನಡೆಯುತ್ತದೆ – ಎಂಬ ಅಂಶಗಳೇ ಜ್ಞಾನದ ಪರಮಾವಧಿ' ಎಂದು ಜನ್ಮದಿಂದಲೇ ಅರಿತ. 'ಇದು ಸತ್ಯ ಸತ್ಯ ಸತ್ಯ' ಎಂದು ತನ್ನ ಜೊತೆಗಾರರಿಗೆಲ್ಲಾ ಪ್ರೀತಿಯಿಂದ ಆದರದಿಂದ ಮನ ಮುಟ್ಟಿಸಿದ. ಇದು ರಾಜಾಜ್ಞೆಗೆ ವಿರೋಧ, ತನ್ನ ತಂದೆಯ ಅಭೀಷ್ಟಕ್ಕೆ ವಿರೋಧವೆಂದಾಗಲೂ ಅವನು ನಿತ್ಯಸತ್ಯವನ್ನು ಬಿಡಲಿಲ್ಲ, ಮರೆಮಾಚಲಿಲ್ಲ. ಈ ಕಾರಣಗಳಿಂದ ಅವನು ತಂದೆಗೆ ವಿರೋಧಿಯಾದ, ತಂದೆ ಎಂದುಕೊಂಡಂತೆ ಅವನ ಕುಲಕ್ಕೆ ಕುಠಾರನಾದ. ಹಿರಣ್ಯಕಶಿಪುವು ಇದನ್ನು ಸಹಿಸಲಿಲ್ಲ. ವಿಧವಿಧವಾಗಿ ಸಾಮ ದಾನ ಭೇದೋಪಾಯಗಳಿಂದ ಮಗುವನ್ನು ತಿದ್ದಲು ಮಾಡಿದ ಯತ್ನಗಳು ಫಲಿಸಲಿಲ್ಲ. ಆದ್ದರಿಂದ ರೋಷಾವಿಷ್ಟನಾಗಿ, ಮಗನೆಂಬ ಮಮತೆಯನ್ನು ಬಿಟ್ಟು, ದಂಡೋಪಾಯವನ್ನು ಬಳಸಿದ. ವಿಷ ಕುಡಿಸಿದ, ಆನೆಯಿಂದ ತುಳಿಸಿದ, ಸರ್ಪಗಳಿಂದ ಕಚ್ಚಿಸಿದ, ಪರ್ವತದಿಂದ ತಳ್ಳಿಸಿದ, ಕೈಕಾಲು ಕಟ್ಟಿ ಸಾಗರದಲ್ಲಿ ಮುಳುಗಿಸಿದ. "ಸರ್ವಂ ವಿಷ್ಣುಮಯಂ ಜಗತ್". ವಿಷ್ಣುಭಕ್ತನಿಗೆ ವಿಷ್ಣುವಿನಿಂದ ವಿಮುಕ್ತಿ ದೊರೆತು ಯಾವ ವಿಧದಲ್ಲೂ ಮಗುವು ಆಘಾತ ಹೊಂದಲಿಲ್ಲ. ಶ್ರೀಹರಿಯ ಅಪಾರ ಕರುಣೆಯನ್ನು, ಅವನ ಸ್ಪರ್ಶದರ್ಶನವನ್ನು ಪ್ರತಿಸನ್ನಿವೇಶದಲ್ಲೂ ಅನುಭವಿಸಿದ. ಹರಿಕೃಪೆಯ ಶ್ರೀರಕ್ಷೆಯನ್ನು ವಿಫಲಗೊಳಿಸಬಲ್ಲವರಾರು ? ದಾನವನಿಗೆ ಕೋಪ ನೆತ್ತಿಗೇರಿತು. ಮಗನನ್ನು ಎಳೆದು ತಂದು ತನ್ನ ಆಸ್ಥಾನ ಮಂಟಪದಲ್ಲಿ ಅಪರಾಧಿಯಾಗಿ ನಿಲ್ಲಿಸಿ, ಕೈಯಲ್ಲಿ ಖಡ್ಗ ಹಿಡಿದು, ಮಗನನ್ನು ಹೂಂಕರಿಸಿ, ನಿನಗೆ ಈ ಮಾಯಾಶಕ್ತಿ ಹೇಗೆ ಬಂದಿತು, ಹೇಗೆ ಸಾಧ್ಯವಾಯಿತು ಎಂದು ಗುಡುಗಿದನು. ಸಾತ್ವಿಕ ಬಾಲಕನು ಭಯ ಭೀತಿಗಳಿಲ್ಲದೆ, ಹರಿಯನ್ನೇ ನೆನೆಯುತ್ತಾ "ಇದೆಲ್ಲವೂ ಶ್ರೀಹರಿಯ ಕೃಪೆ" ಎಂದಾಗ, ಹಿರಣ್ಯಕಶಿಪುವು ತಾಳ್ಮೆಯನ್ನು ಕಳೆದುಕೊಂಡನು. ಅವನಿಗೆ ಹುಬ್ಬುಗಂಟಿಕ್ಕಿ ಮುಖ ಕೆಂಪಡರಿತು. ಭೂಮಿಯನ್ನು ಪಾದದಿಂದ ಘಟ್ಟಿಸಿ ಅವನು ತೋರಿದ ಆಚರಣೆಗಳು —

"ತಾಮಸ ಗುಣ ಚರಿತ್ರ ಮ್ಯಾಣಸ್ಥೈರ್ಯೋ ಭೂತ್ವಾ, ವಿಸ್ರಂಭೇಣ ಹುಂಕೃತ್ಯ, ಬಾಲಂ ಪ್ರಹ್ಲಾದಂ ಪರಮಭಾಗವತಂ ಧಿಕ್ಕೃತ್ಯ ಭಗವಂತಂ ಶ್ರಿಯಃಪತಿಂ ಅಸ್ಮಿನ್ ಸ್ತಂಭೇ ಪ್ರದರ್ಶಯ" ಎಂದು ಗರ್ಜಿಸುತ್ತಾ, ತನ್ನ "ದಿಗ್ದಂತಿದಂತಭೇದನಪಾಟವಪ್ರಶಸ್ತೇನ ಹಸ್ತೇನ ಸಭಾಮಂಟಪಸ್ತಂಭಂ ಪ್ರತಾಡಯತಿ".

– ಇದು ಸನ್ನಿವೇಶ. ತಾಮಸಾಹಂಕಾರದಿಂದ ಕೂಡಿದ ದಾನವೇಂದ್ರ ಒಂದು ಕಡೆ. ತನಗಿಂತ ಒಂದು ಪರದೈವವಿದೆಯೆಂದು ನುಡಿಯುತ್ತಿರುವ ಬಾಲಕ ಮತ್ತೊಂದು ಕಡೆ. ಅಂಥ ಪರವಸ್ತುವಿದ್ದರೆ ಅದನ್ನು ಕೆಡೆದುಹಾಕಿ ತಾನೇ ಪರಾತ್ಪರನೆಂದು ಸ್ಥಾಪಿಸಲು ಹುಂಕರಿಸಿ ಅರ್ಭಟಿಸುತ್ತಿರುವ ತಾಮಸಿ ದಾನವ. ಅವನ ಡಿಂಬನಾದರೋ ಪ್ರಪಂಚ ತಿಳಿಯದ ಎಳೆಯ, ಅವನಿಗಾದರೋ ಹುಟ್ಟಿನಿಂದಲೇ ಬೆಳೆದು ಬಂದ ಗುಣ ನಿರ್ಭೀತಿಯಿಂದ ಹರಿಸ್ಮರಣೆ ಮಾಡುತ್ತಿರುವುದು. ತನಗೆ ಕಷ್ಟವೊದಗಿದೆಯೆಂಬ ಅರಿವಿಲ್ಲದೆ, ತನ್ನ ಪ್ರಾಣಕ್ಕೆ ಅಪಾಯ ಒದಗಿದೆಯೆಂದೂ ತಿಳಿಯದ ಮುಗ್ಧ ಬಾಲಕ. ಹರಿ, ಹರಿ, ಹರಿ, – ಹೇಳು ಅವನ ಹೆಸರು, ಬದುಕು ಅನುಗಾಲ, ಅದು ಅವನ ಕೃಪೆ–

ಶ್ರೀ ಎಸ್- ನರಸಿಂಹಾಚಾರ್ಯ

## ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹ ದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆ ಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ.**

ಇಷ್ಟೇ ಅವನು ತಿಳಿದದ್ದು. ಆ ಹರಿಯನ್ನು ಕಾಪಾಡು ಎಂದು ಕೇಳಲೂ ಬಾಯಿಲ್ಲ. ಶ್ರೀ ಹರಿಯ ನಿರಂತರಾನುಭವ ಮಾತ್ರ ಅವನದು. ಅಪ್ಪನಾದವನು ಶ್ರೀಹರಿಯನ್ನು ಈ ಸ್ತಂಭದಲ್ಲಿ ತೋರಿಸು ಎಂದುದೂ ಅವನ ಗಮನದಲ್ಲಿಲ್ಲ. ಅವನ ಸುತ್ತ ಅವನಿಗೆ ಎಲ್ಲೆಲ್ಲೂ ಎಲ್ಲದರಲ್ಲೂ ಶ್ರೀಹರಿಯು ಕಾಣಿಸುತ್ತಲೇ ಇದ್ದಾನೆ. ಇದಕ್ಕಾಗಿ ಅವನು ಶ್ರೀಹರಿಯನ್ನು ಆ ಸ್ತಂಭದಲ್ಲಿ ದರ್ಶನ ಕೊಡೆಂದು ಪ್ರಾರ್ಥಿಸುವ ಗೋಜಿಗೇ ಹೋಗಲಿಲ್ಲ. ಇರುವ ಪದಾರ್ಥ ಕಾಣುವ ಕಣ್ಣಿಗೆ ಕಂಡೇ ತೀರ ಬೇಕಲ್ಲವೇ! ಹುಡುಗ ಪ್ರಾರ್ಥಿಸಲಿಲ್ಲ, ತಂದೆ ಕಂಭದಲ್ಲಿ ತೋರಿಸೆಂದು ಗರ್ಜಿಸಿದ. ಆ ಘೋರ ತಾಮಸಿಗೂ ಶ್ರೀಹರಿಯನ್ನು ಕಾಣಲೇಬೇಕೆಂಬ ಹಠ ಮೂಡಿಬಂತು. ಆಗ ನಡೆದ ಅದ್ಭುತ ಘಟನೆ —

ಹಿರಣ್ಯಕಶಿಪುವು ಮಹಾರೋಷದಿಂದ ತನ್ನ ಸಭಾಮಂಟಪದ ಸ್ತಂಭವನ್ನು ಘಟ್ಟಿಸಿದ. ಆಗ "ತಸ್ಮಾತ್ಸ್ತಂಭಾತ್ ಚಿಂಭಜ್ಯಮಾನಾತ್...... ಚ್ಛಟಚ್ಛಟ ಸ್ಫಟಸ್ಫಟ ಧ್ವನಿ ಪ್ರಮುಖ ಭಯಂಕರ ಆರಾವ ಪುಂಜ್ಯೈಃ" – ದಶದಿಕ್ಕುಗಳೂ ತುಂಬಿ ಹೋದುವು. ಬ್ರಹ್ಮಾಂಡಕಟಾಹವೇ ಪರಿಸ್ಫೋಟ ಗೊಂಡಂತೆ ಬ್ರಹ್ಮಾದಿಗಳಿಗೆಲ್ಲಾ ಅನುಭವ ವಾಯಿತು. ದೇವಾದಿದೇವತೆಗಳೆಲ್ಲಾ ಭಯ ಗೊಂಡವರಾಗಿದ್ದಾರೆ. ಏನು ನಡೆಯುವುದೋ ನೋಡಬೇಕೆಂಬ ಕುತೂಹಲವುಳ್ಳವರಾಗಿದ್ದಾರೆ. ಮರ್ತ್ಯರಿಗೆ ಅದೃಶ್ಯರಾಗಿ ಬಂದು ನೆರೆದಿದ್ದಾರೆ. ಸಭೆಯಲ್ಲಿದ್ದ ಸಭಿಕರೆಲ್ಲರೂ ಪ್ರಳಯ ಸದೃಶಕಾಲ ವೊದಗಿದೆ ಎಂದು ತಲ್ಲಣಿಸುವ ಹೃದಯದಿಂದ ಭೀತರಾಗಿದ್ದಾರೆ.

ಭಗವಂತ ಕರುಣಾಮಯ ಮೂರ್ತಿ. ಎಲ್ಲ ರನ್ನೂ ಸಲಹುವುದೇ ಅವನ ಮತ. ಸಲಹಲು ಏನಾದರೂ ಒಂದು ವ್ಯಾಜ ಸಿಗುವುದೇ ಎಂದು ಎದುರು ಕಾಯುತ್ತಿರುವವನು ಅವನು. ಪ್ರಹ್ಲಾದನ ನಿಶ್ಚಲ ನಿಷ್ಕಾಮಭಕ್ತಿ ಅವನಿಗೆ ತುಂಬಾ ಹಿಡಿಸಿತು.ಅವನ ಪ್ರಾರ್ಥನೆ ಅನವಶ್ಯಕ. ದುಷ್ಟ ದಾನವನಾದರೋ ಭಗವಂತ ಯಾವನೋ ಅವನನ್ನು ನೋಡಿಯೇಬಿಡಬೇಕೆಂದು ತೀವ್ರ ಭಾವನೆಯಿಂದ ಕೂಡಿದ್ದಾನೆ. ಕೆಡಕು ಭಾವನೆ ಯಿಂದಲೇ ಆಗಲಿ ಒಬ್ಬ ಭಾಗವತೋತ್ತಮನನ್ನು ಭಗವಂತನನ್ನು ದರ್ಶನ ಮಾಡಿಸುವಂತೆ ಒತ್ತಾಯಿಸುತ್ತಿದ್ದಾನೆ. ಇಬ್ಬರಿಂದಲೂ ಭಗವಂತನಿಗೆ ವ್ಯಾಜ ಸಿಕ್ಕಂತೆ ಆಯಿತು. ಅಹೋ! ಉದಯಿಸಿದ. ಬ್ರಹ್ಮ ಸೃಷ್ಟಿಯಲ್ಲ, ಹರಿಯ ಸ್ವಸೃಷ್ಟಿ. ಬ್ರಹ್ಮ ಸೃಷ್ಟಿಯಲ್ಲಿ ಕಾಣಸಿಗುವ ಯಾವ ಜೀವ ಜಂತು ವೇಷವೂ ಅಲ್ಲ. ತನ್ನದೇ ಆದ ಒಂದು ವಿಚಿತ್ರ ಸೃಷ್ಟಿರೂಪದಲ್ಲಿ ಕಾಣಿಸಿ

ಕೊಂಡ. ಅಚೇತನಗಳು ಚೇತನಗಳಿಗೆ ದೇಹವೆಂಬ ರೀತಿಯಲ್ಲಿ ದಾನವನ ಹಸ್ತಾಘಾತದಿಂದ ವಿಸ್ಫೋಟಗೊಂಡ ಆ ಸ್ತಂಭದಲ್ಲೇ ಕಾಣಿಸಿಕೊಂಡ. ಸ್ತಂಭವು ಬಿರಿದಿದೆ. ಒಳಗೆ ಶ್ರೀಹರಿ ಕುಳಿತಿದ್ದಾನೆ, ಯೋಗಮುದ್ರೆಯಲ್ಲಿ ಕುಳಿತಿದ್ದಾನೆ. ತನ್ನ ಭಕ್ತನ ಅಂತರಂಗವನ್ನು ಕಾಯಬೇಕು ಎನ್ನುವುದಕ್ಕಾಗಿ ಯೋಗಿಯಂತೆ ಸಮಯ ಕಾಯುತ್ತಾ ಕುಳಿತಿದ್ದಾನೆ. ಛಟಛಟ ಎಂದು ಕಂಬವು ಬಿರಿದಾಗ ಒಳಗೆ ಕುಳಿತಿದ್ದ ಶ್ರೀಹರಿ ನರಹರಿಯಾಗಿ ಕಾಣಿಸಿದ. ಕಾಣಿಸಿದ ಪ್ರಕಾರ ಹೀಗಿದೆ --

ಮಾಣಿಕ್ಯಾದ್ರಿ ಸಮಪ್ರಭಂ ನಿಜರುಚಾ
ಸಂತ್ರಸ್ತ ರಕ್ಷೋಗಣಂ
ಜಾನುನ್ಯಸ್ತ ಕರಾಂಬುಜಂ ತ್ರಿನಯನಂ
ರತ್ನೋಲ್ಲಸದ್ಭೂಷಣಂ ।
ಬಾಹುಭ್ಯಾಂ ಧೃತ ಶಂಖ ಚಕ್ರಮನಿಶಂ
ದಂಷ್ಟ್ರೋಗ್ರ ವಕ್ತ್ರೋಜ್ಜ್ವಲಂ
ಜ್ವಾಲಾಜಿಹ್ವಮುದಗ್ರಕೇಶನಿವಹಂ
ವಂದೇ ನೃಸಿಂಹಂ ವಿಭುಂ ॥

ಭಗವಂತನ ಆವಿರ್ಭಾವ ಮಹದದ್ಭುತ. ಅವನ ರೂಪ ರಮಣೀಯ ಭಯಂಕರ. ಪ್ರಹ್ಲಾದನಿಗೆ ಆನಂದಾತಿವಹ. ಭಗವಂತನ ದಿವ್ಯಮೂರ್ತಿಯನ್ನು ಸಂದರ್ಶಿಸಿದ. ಅವನಿಗೆ ಯೋಗನರಸಿಂಹನಾಗಿ ಕಾಣಿಸಿದ. ಶಾಂತ, ಪ್ರಹ್ಲಾದಕರ ಮೂರ್ತಿಯಾಗಿ ಕಾಣಿಸಿದ. ಭಗವಂತನು ಪ್ರಹ್ಲಾದನಿಗೆ "ನಾರಾಯಣ ನಾರಸಿಂಹ, ನಾರಾಯಣ ದಿವ್ಯಸಿಂಹ, ನಿರ್ಮಲಚಿತ್ತ ಸಿಂಹ, ಕಾಮದ ಕಾಮಸಿಂಹ, ಭುವನೈಕ ಪೂರ್ಣಸಿಂಹ"ನಾಗಿ ಕಾಣಿಸಿದ. ಪ್ರಹ್ಲಾದನು ಭಕ್ತಿಯ ಉದ್ವೇಗದಿಂದ ಪುಳಕಿತನಾದ. ಅದೇ ಭಗವಂತ ತತ್ಕಾಲದಲ್ಲಿಯೇ ಹಿರಣ್ಯಕಶಿಪುವಿಗೆ ಜ್ವಾಲಾಮೂರ್ತಿಯಾಗಿ ಕಾಣಿಸಿದ. ತಾನು ಬಡಿದ ಕಂಬದಿಂದ ಇದ್ದಕ್ಕಿದ್ದ ಹಾಗೆ ನೆಗೆದು ಜ್ವಾಲೆಯನ್ನು ಚಾಚುತ್ತಾ ಧುಮುಕಿ ಬಂದ ಘೋರಮೂರ್ತಿ ಹಿರಣ್ಯ ಕಶಿಪುವಿಗೆ "ನಾರಾಯಣ ಕ್ರೂರಸಿಂಹ, ನಾರಾಯಣ ರೌದ್ರ ಸಿಂಹ, ಭೀಷಣ ಭದ್ರಸಿಂಹ, ಕಾಲಾಗ್ನಿ ರುದ್ರಸಿಂಹ"ನಾಗಿ ಕಾಣಿಸಿದ. ಹೀಗೆ ಏಕಕಾಲದಲ್ಲಿ ಪ್ರಹ್ಲಾದನಿಗೆ ರಮಣೀಯನಾಗಿಯೂ, ಹಿರಣ್ಯಕಶಿಪುವಿಗೆ ಭೀಷಣನಾಗಿಯೂ ದರ್ಶನಕೊಟ್ಟ.

ಹೀಗೆ ಇಬ್ಬರಿಗೂ ಪರಬ್ರಹ್ಮನ ದರ್ಶನವಾಯಿತು. ಒಬ್ಬ ಪರಸ್ವರೂಪವನ್ನು ತಿಳಿದ, ಇನ್ನೊಬ್ಬ ತಿಳಿಯಲು ನಿರಾಕರಿಸಿದ, ತನ್ನ ಪರತ್ವಕ್ಕೆ ಪೈಪೋಟಿ ಒದಗಿದಂತೆ ಭಾವಿಸಿ ಕ್ರೋಧಸಂತಪ್ತನಾದ. ಆದರೆ ಹಿಂದಿನ ಜನ್ಮದ ವಾಸನಾಬಲದಿಂದ ಈ ಮೂರ್ತಿಯ ದರ್ಶನದ ನೆನಪು ಮಸಕು ಮಸಕಾಗಿ ಬಂದು ಮಾಯವಾಗುತ್ತಿತ್ತು ಮನಸ್ಸಿನಲ್ಲಿ ಏನೋ ತೊಳಲಾಟ ಆರಂಭವಾಯಿತು. ಮನಸ್ಸು ಕುಗ್ಗಿತು. ಹೀಗೆ ಮಾನಸಿಕ ತೊಳಲಾಟದಲ್ಲಿದ್ದ ಹಿರಣ್ಯಕಶಿಪುವನ್ನು ನರಸಿಂಹರೂಪೀಭಗವಂತನು ಹಿಡಿದು ತನ್ನ ಕಡೆಗೆ ಸೆಳೆದುಕೊಂಡನು. ಆ ಸಭಾಮಂಟಪದ ಹೊಸ್ತಿಲ ಮೇಲೆ ಪದ್ಮಾಸನದಲ್ಲಿ ಕುಳಿತುಕೊಂಡು ಆ ದಾನವನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡ. ಭಗವಂತನ ಸ್ಪರ್ಶ, ಭಗವಂತನ ದರ್ಶನ, ತನ್ನ ಸ್ವಂತ ಮಾನಸಿಕ ಸ್ಥಿತಿ – ಇವುಗಳಿಂದ ಹಿರಣ್ಯಕಶಿಪು ಕ್ರಿಯಾಶೂನ್ಯನಾಗಿ ಆ ದಿವ್ಯಮೂರ್ತಿಯನ್ನು ನೋಡುತ್ತಾ ಮಲಗಿಬಿಟ್ಟ, ಆ ಭವ್ಯ ನರಸಿಂಹನ, ಕಲ್ಯಾಣ ನರಸಿಂಹನ, ಆದರೆ ಭಯಂಕರ ದರ್ಶನ ಕೊಡುತ್ತಿದ್ದ ಆ ಮೂರ್ತಿಯನ್ನು ನೋಡಿ ನೋಡಿ, ತನ್ನ ಆರ್ಭಟವೆಲ್ಲಾ ಅಡಗಿ ಪೂರ್ವಸ್ಮೃತಿ ಪೂರ್ಣವಾಗಿ ಬಾರದೆ, ಮುಂದೇನು ಎಂದು ನೋಡುತ್ತಲೇ ಮಲಗಿದ. ಭಗವಂತನಾದರೋ ಆ ದಾನವನಿಗೆ ತನ್ನ ಒಂದು ಕಣ್ಣಿನಿಂದ ಹೆದರಿಕೆಯನ್ನು ಇನ್ನೊಂದು ಕಣ್ಣಿನ ನೋಟದಿಂದ ತನ್ನ ರೂಪದಲ್ಲಿ ಉನ್ಮಾದತೆಯನ್ನೂ ಉಂಟುಮಾಡಿ ಆ ದಾನವನ ಹೊಟ್ಟೆಯನ್ನು ತನ್ನ ಉಗುರುಗಳಿಂದ ಬಗೆದು ಆ ದಾನವನ ಶರೀರವನ್ನು ಸಭಾಸ್ತಂಭವು ಹೇಗೆ ಸೀಳಿತೋ ಹಾಗೆ ಸೀಳಿದನು. ಹೀಗೆ ಭಗವದವತಾರವಾದ ಕಾಲ ಪ್ರದೋಷಕಾಲ, ಹಗಲೂ ಅಲ್ಲ, ರಾತ್ರಿಯೂ ಅಲ್ಲ, ದಾನವ ಇಹ ಲೋಕ ಯಾತ್ರೆ ಮುಗಿಸಿದ್ದು ನೆಲದಲ್ಲಲ್ಲ, ಬಾನಿನಲ್ಲಲ್ಲ, ನೃಸಿಂಹನ ಮಡಿಲಲ್ಲಿ. ಅವನ ಮರಣ ಮನೆಯ ಒಳಗೂ ಅಲ್ಲ, ಹೊರಗೂ ಅಲ್ಲ, ಆ ಸಭಾಭವನದ ಹೊಸ್ತಿಲ ಮೇಲೆ. ಅವನಿಗೆ ಹತಿಯುಂಟಾದುದು ಯಾವ ಆಯುಧದಿಂದಲೂ ಅಲ್ಲ, ಯಾವ ಅಸ್ತ್ರದಿಂದಲೂ ಅಲ್ಲ, ಹರಿಯನಖದಿಂದ ಮಾತ್ರ. ಹೀಗೆ ಬ್ರಹ್ಮದತ್ತವಾದ ವರಕ್ಕೆ ಲೋಪವಾಗದಂತೆ ಶ್ರೀಹರಿಯು ಹಿರಣ್ಯಕಶಿಪುವಿನ ಒಡಲನ್ನು ಸೀಳಿ ಹೊಟ್ಟೆಯಿಂದ ಕರುಳನ್ನು ಹೊರತೆಗೆದನು. ಆ ಕರುಳನ್ನು ಬಿಸಾಡದೆ ತನ್ನ ನಿತ್ಯ ಕಿಂಕರನ ಕರುಳಾದ್ದರಿಂದ ಮಾಲೆಯಾಗಿ ತಾನು ಧರಿಸಿದ. ಅದು ಹೊನ್ನಿನ ಸರಮಾಲೆಯಾಗಿ ನೃಸಿಂಹನು ಆನ್ತ್ರಮಾಲಾಧರನಾದ, ಭಗವಂತನ ಮಾಯಾ ಚೇಷ್ಟೆಗಳು ಅಲ್ಲಿದ್ದವರಿಗೆ ಅರ್ಥವಾಗದೆ ಹೆದರಿದರು. ಜನರಿಗೆ ನೃಸಿಂಹರೂಪ ರೌದ್ರಸಿಂಹ, ಭೀಷಣಸಿಂಹ, ಬೃಂಹಿತಭೂತಸಿಂಹನಂತೆ ಕಾಣಿಸಿತು. ದಾನವನ ಕರುಳನ್ನು ಬಗೆಯುವ ವ್ಯಾಜದಲ್ಲಿ ದುಷ್ಟರನ್ನು ದಮನಮಾಡುವ ತನ್ನ ಘೋರರೂಪವನ್ನು ಪ್ರದರ್ಶಿಸಿದನು.

ತತಃ ಖಡ್ಗಧರಂ ದೈತ್ಯಂ
ಜಗ್ರಾಹ ನರಕೇಸರೀ ।
ಸಂಧ್ಯಾಕಾಲೇ ಸಭಾದ್ವಾರೇ
ಸ್ವಾಂಕೇ ನಿಕ್ಷಿಪ್ಯ ಭೈರವಃ ॥
ಹಿರಣ್ಯಕಶಿಪೋರ್ವಕ್ಷೋ
ವಿದಾರ್ಯಾತೀವ ಶೋಷತಃ ।
ಉದ್ಧೃತ್ಯ ಚಾಂತ್ರ ಮಾಲ್ಯಾನಿ
ನಖೈಃ ವಜ್ರಸಮಪ್ರಭೈಃ ॥
ಮೇನೇ ಕೃತಾರ್ಥಮಾತ್ಮಾನಂ
ಸರ್ವತಃ ಪರ್ಯವೈಕ್ಷ್ಯತ ॥
ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ
ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯ ತಾತ್ಯದ್ಭುತ ರೂಪಮುದ್ವಹನ್
ಸ್ತಂಭೇ ಸಭಾಯಾಂ ನ ಮೃಗಂ
ನ ಮಾನುಷಂ ॥

ಭಗವಂತನು ಸತ್ಯಕಾಮ, ಸತ್ಯಸಂಕಲ್ಪ, ಅವನು ಸತ್ಯಸ್ಯ ಸತ್ಯ ಈ ಅಂಶವನ್ನು ನರಸಿಂಹಾವತಾರವು ಜಗತ್ತಿಗೆ ಸಾರಿತು, ಪರಮಾತ್ಮನ ಕರುಣೆ ಸತ್ಯ, ಭಕ್ತವತ್ಸಲನಾದ ಶ್ರೀಹರಿಯು ಯಾವಕಾರಣದಿಂದಲೂ ನಂಬಿದವರ ಕೈಬಿಡ. ಅವನು ಆರ್ತತ್ರಾಣಪರಾಯಣ. ತನ್ನ ಭಕ್ತ ಹೇಳಿದ ಮಾತನ್ನು ಅಪ್ರಾರ್ಥಿತನಾಗಿಯೇ ನಡೆಸಿಕೊಟ್ಟ, ತನ್ನ ಅವತಾರ ರಹಸ್ಯದಿಂದ ಭಗವಂತನು ಎಲ್ಲೆಲ್ಲೂ ವ್ಯಾಪಿಸಿ ಯಾವಾಗಲೂ ಇದ್ದೇ ಇರುವುದಾಗಿ ಪ್ರಮಾಣೀಕರಿಸಿದ. ಆದ್ದರಿಂದಲೇ ಭಗವದನುಭವಿಗಳು ಎದೆತಟ್ಟಿ ಹೀಗೆ ಹೇಳುತ್ತಾರೆ.

ಸತ್ಯಂ ಸತ್ಯಂ ಪುನಃ ಸತ್ಯಂ
ಉದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ ಪರಂ ನಾಸ್ತಿ
ನ ದೈವಂ ಕೇಶವಾತ್ಪರಂ ॥

* * * *

ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಂ ॥

ಭಗವಂತನ ಈ ಅಪ್ರಾಕೃತಲೀಲೆಯಿಂದ "ಪ್ರಹ್ಲಾದ ಹಿರಣ್ಯಕಶಿಪು ರಂಜನಭಂಜನ ನಿಮಿತ್ತಾಂತರಂಗ ಬಹಿರಂಗ ಜೇಗೀಯಮಾಣ ಕರುಣ ವೀತರಸಸಂಯುತಃ" ಎಂಬುವ ಅಂಶ ಪ್ರಕಾಶಪಟ್ಟಿತು.

ಭಗವಂತನ ಈ ಲೀಲಾವಿನೋದಗಳು ಹರವಿರಿಂಚಾದಿಗಳಿಗೂ ತಿಳಿಯಲಸಾಧ್ಯ

ವಾಯಿತು. ಅದೃಶ್ಯರೂಪವಾಗಿ ಉಪಸ್ಥಿತರಿದ್ದ ಇಂದ್ರಾದಿ ದೇವತೆಗಳೆಲ್ಲರಿಗೂ ಭಯವೋ ಭಯ. ಭಗವಂತನ ಕೋಪವನ್ನು ಉಪಶಮನ ಮಾಡು ವುದು ಹೇಗೆಂದು ಯೋಚನಾಕ್ರಾಂತರಾದರು, ಲೋಕಮಾತೆ ಜಗದ್ಧಾತ್ರಿಯಾದ ಮಹಾಲಕ್ಷ್ಮಿ ಯನ್ನು ನೆನೆಸಿಕೊಂಡು ಸ್ತುತಿಸತೊಡಗಿದರು.

ತೇ ಪ್ರಸಾದಯಿತುಂ ಭೀತಾಃ
ಜ್ವಲಂತಂ ಸರ್ವತೋಮುಖಂ ।
ಮಾತರಂ ಜಗತಾಂ ಧಾತ್ರೀಂ
ಚಿಂತಯಾಮಾಸು ರೀಶ್ವರೀಂ ॥

ಕರುಣಾ ಮೂರ್ತಿಯಾದ ದೇವಿ "ಸಾ ದೇವೀ ತತ್ರೈ ವಾವಿರಭೂತ್". ಆಕೆಯನ್ನು ದರ್ಶನ ಮಾಡಿದ ಕೂಡಲೇ ಮಕ್ಕಳು ತಾಯಿಗೆ ಅರುಹು ವಂತೆ ನಡೆದುದೆಲ್ಲವನ್ನೂ ಹೇಳಿ ಮುಂದಕ್ಕಾಗ ಬೇಕಾದ ಕೆಲಸಕ್ಕಾಗಿ ಪ್ರಾರ್ಥಿಸಿದರು. "ತ್ರೈ ಲೋಕ್ಯಸ್ಯಾ ಭಯಂ ಸ್ವಾಮೀ ಯಥಾ ದದ್ಯಾತ್ ತಥಾ ಕುರು" ಎಂದು ಬೇಡಿಕೊಂಡರು. ಈ ಸೂಕ್ಷ್ಮವನ್ನು ಗ್ರಹಿಸಿದ ನರಸಿಂಹಸ್ವಾಮಿ ಹೊಸ್ತಿಲ ಮೇಲಿದ್ದವನು ಆಸ್ಥಾನದಲ್ಲಿದ್ದ ರತ್ನ ಸಿಂಹಾಸನದಲ್ಲಿ ಆಸೀನನಾಗಿ ತನ್ನ ಉಗ್ರ ನರ ಸಿಂಹ ವೇಷದ ಭೀಷಣ ರಮಣೀಯಾಕೃತಿಯನ್ನು ತನ್ನ ಹೃದಯೇಶ್ವರಿಯೂ ಅರ್ಧಾಂಗಿಯೂ ಆದ ಮಹಾಲಕ್ಷ್ಮಿಗೆ ಕಾಣಿಸಿದ ಬಗೆ–

ಉನ್ಮದ್ಯಾಪ್ಸತ್ ಸಹಸ್ರ ಪ್ರಭಮಶಸಿ
ನಿಭಂ ಸ್ವೇಕ್ಷಣೈರ್ವಿಸ್ಫುರಂತಂ
ವಹ್ನೀನಾಘ್ರಾಯ ವಿದ್ಯುತ್ತತಿ ವಿತತಿ
ಸಟಾಭೀಕ್ಷಣಂ ಭೀಷಣೈಶ್ಚ ।
ದಿವ್ಯೈರಾದೀಪ್ತ ದೇಹಂ ನಿಶಿತ
ನಖಲಸತ್ ಬಾಹುದಂಡೈರನೇಕೈಃ
ಸಂಭಿನ್ನಂ ಭಿನ್ನ ದೈತ್ಯೇಶ್ವರ
ತನುಮತನುಂ ನಾರಸಿಂಹಂ ಭಜಾಮಃ ॥

ತಾಯಿಮಹಾಲಕ್ಷ್ಮಿ ಸನ್ನಿವೇಶವನ್ನು ಗ್ರಹಿ ಸಿದಳು, ಅಲ್ಲೇ ನಿಂತಿದ್ದ ಮಗು ಪ್ರಹ್ಲಾದನನ್ನು ಕೈಯಲ್ಲಿ ಹಿಡಿದು ಭಗವಂತನ ಸನ್ನಿಧಿಗೆ ಬಿಜಯ ಮಾಡಿಸಿದಳು, ಮಗುವಿನ ಜೊತೆಯಲ್ಲಿ ನಮಸ್ಕ ರಿಸಿ ಭಗವಂತನನ್ನು ಕಟಾಕ್ಷಿಸಿದಳು. ದಿವ್ಯದಂಪ ತಿಗಳು ಇಂಗಿತಜ್ಞರು.

ತಾಂ ದೃಷ್ಟ್ವಾ ಮಹಿಷೀಂ ಸ್ವಸ್ಯ
ಪ್ರಿಯಾಂ ಸರ್ವೇಶ್ವರೋ ಹರಿಃ ॥
ರಕ್ಷಃ ಶರೀರಜಂ ಕೋಪಂ
ಸರ್ವಂ ತತ್ಯಾಜ ವತ್ಸಲಃ ।
ಅಂಕೇ ನಾದಾಯ ತಾಂ ದೇವೀಂ
ಸಮಾಶ್ಲಿಷ್ಯ ದಯಾನಿಧಿಃ ॥
ಕೃಪಾ ಸುಧಾರ್ದ್ರ ದೃಷ್ಟ್ಯಾ ವೈ
ನಿರೈಕ್ಷತ ಸುರಾನ್ ಹರಿಃ ।

ಪರಸ್ಪರ ಅರಿವಿನಿಂದ ದಿವ್ಯದಂಪತಿಗಳು ಒಂದು ಗೂಡಿದರು. ಕೇವಲ ನರಸಿಂಹನೆನಿಸಿದ್ದವನು ಲಕ್ಷ್ಮೀ ನರಸಿಂಹನಾದ, ತನ್ನ ಉಗ್ರಭಾವವನ್ನು ಬಿಟ್ಟು ಶಾಂತನಾಗಿ ಕಲ್ಯಾಣಾನಂದಮಯ ನರ ಸಿಂಹನಾದ. ದೇವತೆಗಳೆಲ್ಲರೂ ಸಂಭ್ರಮದಿಂದ ಭಗವಂತನ ಸುಧಾರ್ದ್ರ ದೃಷ್ಟಿಯನ್ನು ಪಡೆದು ನಿರ್ಭರ ಮನಸ್ಸಿನವರಾದರು. ಅದ್ಭುತವಾದ ತೇಜಸ್ಸು, ಅದ್ಭುತವಾದರೂಪ, ಅದ್ಭುತವಾದ ಲೀಲೆಯೆಂದು ಹೊಗಳಿದರು.

ಭಕ್ತಾಗ್ರೇಸರನಾದ ಪ್ರಹ್ಲಾದನು ಹರಿನಾಮ ಸ್ಮರಣೆಯ ಅನರ್ಘ್ಯಮಾಲೆಯನ್ನು ಒಂದು ಅಷ್ಟಕ ದಲ್ಲಿ ಸುತ್ತಿಸಿ ಕೊನೆಯದಾಗಿ ಹೇಳಿದ.

ಪ್ರಾಣಪ್ರಯಾಣ ಪಾಥೇಯಂ
ಸಂಸಾರವ್ಯಾಧಿನಾಶನಂ ।
ದುಃಖಾತ್ಯಂತ ಪರಿತ್ರಾಣಂ
ಹರಿರಿತ್ಯಕ್ಷರದ್ವಯಂ ॥

---

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡ ಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ವಿಶಿಷ್ಟಾದ್ವೈತ ದರ್ಶನದ ಸಾರವನ್ನು ಸುಲಭವಾಗಿ ಜ್ಞಾಪಕದಲ್ಲಿಡಲು ಅನುಕೂಲವಾಗುವಂತೆ ಹೀಗೆ ಸಂಗ್ರಹಿಸಲಾಗಿದೆ

ಶ್ರೀಮಲ್ಲಕ್ಷ್ಮಣ ಯೋಗೀನಸ್ತು ಭುವನಂ
ಸತ್ಯಂ ತದೀಶಃ ಶ್ರಿಯಃ |
ಕಾಂತೋ ಬ್ರಹ್ಮ ಸ ಏವ ಸೋಽಖಿಲತನುಃ
ಭಿನ್ನಾಸ್ತತಶ್ಚೇತನಾಃ ||

ಸತ್ಯಾ ಸಂಸೃತಿರೀಶ ನಿಗ್ರಹಕೃತಾ
ಮುಕ್ತಿಸ್ತು ಭಕ್ತ್ಯಾದಿನಾ |
ತತ್ಪ್ರಾಪ್ತಿಃ ಪರಮೇ ಪದೇ ತದನುಭೂತ್ಯಾ
ಖ್ಯೇತಿ ಸಂಚಕ್ಷತೇ ||

ಪ್ರಪಂಚವು ಸತ್ಯ. ಇದಕ್ಕೆ ಅಧಿಪತಿ ಶ್ರೀಮನ್ನಾರಾಯಣನು. ಅವನೇ ಪರಬ್ರಹ್ಮ. ಜಗತ್ತನ್ನು ಅವನು ಶರೀರದಂತೆ ಧರಿಸಿರುವನು. ಅವನಿಗಿಂತ ಜೀವರು ಭಿನ್ನರು. ಪರಮಾತ್ಮನ ಆಜ್ಞೆಯನ್ನು ಅತಿಕ್ರಮಿಸಿ ನಡೆದರೆ ಜೀವನು ಅವನ ನಿಗ್ರಹಕ್ಕೆ ಪಾತ್ರನಾಗುವನು. ಸಂಸಾರವು ಸತ್ಯ. ಭಕ್ತಿ ಮತ್ತು ಪ್ರಪತ್ತಿ ಸಾಧನೆಯಿಂದ ಎಲ್ಲರೂ ಮೋಕ್ಷ ಪಡೆಯಬಹುದು. ಪರಬ್ರಹ್ಮನ ಸಾನ್ನಿಧ್ಯ ಪಡೆದು ಸದಾ ಅವನ ಕೈಂಕರ್ಯದಲ್ಲಿ ನಿರತವಾಗಿರುವುದೇ ಮೋಕ್ಷ. ಇದನ್ನು ವೇದಪ್ರಮಾಣಾಧಾರಗಳಿಂದ ಪ್ರತಿಪಾದಿಸಲಾಗಿದೆ.

ಚಿತ್, ಅಚಿತ್, ಈಶ್ವರ – ಈ ಮೂರು ತತ್ತ್ವತ್ರಯಗಳು. ಚಿತ್ ಎಂದರೆ ಜೀವ. ಅಚಿತ್ ಎಂದರೆ ಪ್ರಕೃತಿ. ಈಶ್ವರ ಎಂದರೆ ಎಲ್ಲರಲ್ಲಿ ಅಂತರ್ಗತನಾಗಿರುವ ಪರಮಾತ್ಮತತ್ತ್ವ. ಈಶ್ವರನಿಗೆ ವಿನಹ ಮತ್ತಾವ ವಸ್ತುವಿಗೂ ಸ್ವತಂತ್ರಸತ್ತಾ ಇಲ್ಲ. ಸರ್ವವೂ ಈಶ್ವರಾಧೀನ. ಚಿತ್. ಅಚಿತ್– ಇವೆರಡೂ ಪರಬ್ರಹ್ಮನ ಶರೀರ. ಪರಬ್ರಹ್ಮನು ಸಗುಣ ಮತ್ತು ಸವಿಶೇಷಣನಾಗಿರುವನು. ನಿರ್ಗುಣಕಲ್ಪನೆಯೇ ಇಲ್ಲವೆಂದು ಈ ದರ್ಶನದ ನಿಲುವು.

ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಪರಬ್ರಹ್ಮನೇ ಕರ್ತೃ. ನಿರ್ಗುಣ ಎಂಬುದರ ತಾತ್ಪರ್ಯ, ಅವನಲ್ಲಿ ಹೇಯಗುಣಾದಿಗಳೊಂದೂ ಇಲ್ಲ ಎಂಬುದು. ಉಪನಿಷತ್ತಿನ

# ವಿಶಿಷ್ಟಾದ್ವೈತ ದರ್ಶನ

ನಿರ್ಗುಣ ಬ್ರಹ್ಮಪದಕ್ಕೆ ಇದೇ ಅರ್ಥ. ಶ್ವೇತಾಶ್ವತರ ಉಪನಿಷತ್ತಿನ ಆಧಾರದ ಮೇಲೆ. ಭೋಕ್ತೃ, ಭೋಗ್ಯ, ಪ್ರೇರಿತ ಎಂಬ ಮೂರುವಿಧ ಬ್ರಹ್ಮವನ್ನು ಕ್ರಮವಾಗಿ ಚಿತ್, ಅಚಿತ್, ಈಶ್ವರ – ಎಂಬ ಮೂರು ರೂಪದಲ್ಲಿ ಈ ದರ್ಶನ ಅಂಗೀಕರಿಸಿದೆ.

ಈಶ್ವರನೊಡನೆ ಚಿತ್. ಅಚಿತ್ ಸಂಬಂಧ, ಶರೀರ ಮತ್ತು ಆತ್ಮ ಇವುಗಳ ಪರಸ್ಪರ ಸಂಬಂಧದಂತೆ ಇದೆ. ಯಾವುದರಲ್ಲಿ ಆತ್ಮ ಇರುವುದೋ, ಯಾವುದು ನಿಯಮನ ಮಾಡಲ್ಪಡುವುದೋ, ಯಾವುದು ಕಾರ್ಯಸಿದ್ಧಿಗಾಗಿ ಪ್ರವೃತ್ತವಾಗುವುದೋ, ಅದು ಶರೀರ. ಈ ಪ್ರಕಾರ ಈಶ್ವರನು ಚಿದಚಿತ್ತುಗಳಿಗೆ ಆಶ್ರಯಭೂತನೂ, ನಿಯಾಮಕನೂ ಆಗಿರುವನು. ಆತ್ಮಭೂತನಿಂದ ಈಶ್ವರನಿಗೆ ಚಿದಚಿತ್ತುಗಳ ಶರೀರವಾಗುತ್ತವೆ. ವಿಶೇಷ್ಯಭೂತನಾದ ಈಶ್ವರನಿಗೆ ಚಿದಚಿತ್ತು ವಿಶೇಷಣವಾಗಿರುತ್ತವೆ. ವಿಶೇಷಣವು ಬೇರೆಯಾಗಿರದೆ ವಿಶೇಷ್ಯ ಸದಾ ಸಂಬಂಧ ಹೊಂದಿರುತ್ತದೆ.

ಜೀವ, ಜಗತ್ತು ಎರಡೂ ಸತ್ಯ. ಸೃಷ್ಟಿ ಪ್ರಳಯದ ತಾತ್ಪರ್ಯ ಹೀಗಿದೆ ಪ್ರಳಯಕಾಲದಲ್ಲಿರುವ ಸೂಕ್ಷ್ಮಜಗತ್ತು, ಸೃಷ್ಟಿಕಾಲದಲ್ಲಿ ಸ್ಥೂಲರೂಪ ತಾಳುವುದರಿಂದ, ಕಾರಣಾವಸ್ಥೆಯ ಬ್ರಹ್ಮನು ಕಾರ್ಯಾವಸ್ಥೆಯ ಬ್ರಹ್ಮನಾಗುತ್ತಾನೆ. ಪ್ರಳಯಕಾಲದಲ್ಲಿ ಜೀವ, ಜಗತ್ತು ಸೂಕ್ಷ್ಮರೂಪತಾಳಿ ಅವ್ಯಾಕೃತ ಬ್ರಹ್ಮನೊಡನೆ ಇರುತ್ತವೆ. "ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ವಾಕ್ಯಕ್ಕೆ ಇದೇ ಅರ್ಥ. ಜಗತ್ತಿನ ಜೀವರನ್ನು ರಕ್ಷಿಸುವುದಕ್ಕಾಗಿ, ಅನುಗ್ರಹಿಸುವುದಕ್ಕಾಗಿ ಪರಬ್ರಹ್ಮನು, ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ– ಎಂಬ ಪಂಚರೂಪಗಳನ್ನು ಧರಿಸುತ್ತಾನೆ.

ಜೀವ — ದೇಹ, ಇಂದ್ರಿಯ, ಪ್ರಾಣ. ಬುದ್ಧಿ, ಜಗತ್ತು ಇವುಗಳಿಗಿಂತ ಜೀವ, ಭಿನ್ನ ಮತ್ತು ವಿಲಕ್ಷಣವಾದುದು; ಇದು ಅನಂತ. ಆನಂದಸ್ವರೂಪ, ನಿತ್ಯ. ಅಣು, ಅವ್ಯಕ್ತ, ಅಚಿಂತ್ಯ, ನಿರವಯವ, ನಿರಾಕಾರ, ಜ್ಞಾನಾಶ್ರಯ, ಸ್ವಯಂಪ್ರಕಾಶ ಮತ್ತು ಅಜಡ. ಜೀವನು ಈಶ್ವರನಿಂದ ನಿಯಮಿಸಲ್ಪಡುವನು. ಅವನಲ್ಲಿ ಶೇಷತ್ವಗುಣವಿರುವುದರಿಂದ ತನ್ನ ಎಲ್ಲ ಕಾರ್ಯಕ್ಕೆ ಈಶ್ವರನನ್ನು ಅವಲಂಬಿಸಿರುವನು. ಈಶ್ವರಾನುಗ್ರಹವಿಲ್ಲದೆ ಅವನು ಯಾವ ಕಾರ್ಯವನ್ನೂ ಸಾಧಿಸಲಾರ. ಅದ್ವೈತವು ಜೀವನನ್ನು ವಿಭು ಎಂದು ಅಂಗೀಕರಿಸಿದ್ದರೆ, ವಿಶಿಷ್ಟಾದ್ವೈತವು ಅವನನ್ನು ಅಣು ಎಂದು ಅಂಗೀಕರಿಸಿದೆ. ಅದ್ವೈತದಲ್ಲಿ ಜೀವನು ಹಿಂದೇ ದೇಹಸಂಬಂಧದಿಂದ ಅನೇಕ ಎಂದು ತೋರುವುದು. ಆದರೆ ವಿಶಿಷ್ಟಾದ್ವೈತದಲ್ಲಿ ಜೀವರು ಅನೇಕ. ಬೇರೆ ಬೇರೆಯಾಗಿರುವರು.

ಜೀವ, ಬ್ರಹ್ಮ ಸಂಬಂಧ — ಜೀವನು ಬ್ರಹ್ಮನಿಗಿಂತ ಭಿನ್ನ. ಬ್ರಹ್ಮನು ಜಗತ್ತಿಗೆ ಕಾರಣ, ಜೀವನಿಗೆ ಅಧಿಪತಿ. ಬ್ರಹ್ಮನು ಈಶ, ಜೀವನು ಅನೀಶ. ಬ್ರಹ್ಮನು ಪ್ರಾಜ್ಞ, ಜೀವನು ಅಜ್ಞ. ಕಿಡಿಯು ಅಗ್ನಿಯ ಅಂಶವಾಗಿರುವಂತೆ, ದೇಹವು ದೇಹಿಯ ಅಂಶವಾಗಿರುವಂತೆ ಜೀವನು ಬ್ರಹ್ಮನ ಅಂಶ. ಜೀವ ಬ್ರಹ್ಮರಲ್ಲಿ, ಅಂಶಾಂಶಿ ಸಂಬಂಧ, ವಿಶೇಷಣ – ವಿಶೇಷ್ಯ ಸಂಬಂಧ, ಶರೀರ – ಶರೀರಿ ಸಂಬಂಧ, ಆಧಾರಾಧೇಯ ಸಂಬಂಧ. ಶೇಷ – ಶೇಷಿ ಸಂಬಂಧ ಇವೆ.

ಸೃಷ್ಟಿ:– ರಾಮಾನುಜರು ಸೃಷ್ಟಿ ವಿಚಾರದಲ್ಲಿ ಉಪನಿಷತ್ತಿನ ಸಿದ್ಧಾಂತವನ್ನು

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ಅಂಗೀಕರಿಸಿದ್ದಾರೆ. ಸರ್ವವ್ಯಾಪಿಯಾದ ಬ್ರಹ್ಮನಲ್ಲಿ ಚಿತ ಅಚಿತ್ ತತ್ತ್ವಗಳಿವೆ. ಸರ್ವ ಶಕ್ತನಾದ ಸರ್ವೇಶ್ವರನ ಸಂಕಲ್ಪದಂತೆ ಸೂಕ್ಷ್ಮ ಪ್ರಕೃತಿಯು ತೇಜ, ಜಲ, ಪೃಥಿವಿ ವಿಭಾಗ ಹೊಂದುತ್ತವೆ. ಇವುಗಳಿಂದ ಸತ್ವ, ರಜ, ತಮೋಗುಣಗಳುಂಟಾಗುತ್ತವೆ. ಈ ಮೂರುಗುಣಗಳ ಸಂಯೋಗ ಮತ್ತು ಮಿಶ್ರಣದಿಂದ ಜಗತ್ತಿನ ಸ್ಥೂಲ ಪದಾರ್ಥ ಗಳು ಉತ್ಪನ್ನವಾಗುತ್ತವೆ. ಈ ಗುಣಗಳು ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿ ಇರುವುವು. ಈ ತತ್ತ್ವದ ಮೂಲ ಸಂಕೇತ ವನ್ನು ಛಾಂದೋಗ್ಯ ಉಪನಿಷತ್ತಿನಲ್ಲಿ ಕಾಣ ಬಹುದು.

ಈಶ್ವರನು ತನ್ನ ಮಾಯಾಶಕ್ತಿಯಿಂದ ಜಗತ್ತನ್ನು ಸೃಷ್ಟಿಮಾಡುವನು. ಮಾಯ ಎಂದರೆ ಸೃಷ್ಟಿಮಾಡುವ ಅದ್ಭುತಶಕ್ತಿ. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಈಶ್ವರನನ್ನು ಮಾಯಾ ಎಂದು ಕರೆಯಲಾಗಿದೆ. ಈಶ್ವರ ನನ್ನು ಮಾಯಾವಿ ಎಂಬುದರ ತಾತ್ಪರ್ಯ, ಅವನ ಸೃಷ್ಟಿಕಾರ್ಯ ಅದ್ಭುತ ಮತ್ತು ವಿಚಿತ್ರ ಎಂಬುದನ್ನು ತೋರಿಸುವುದಕ್ಕಾಗಿ. ಸೃಷ್ಟಿಯು ಈಶ್ವರನಷ್ಟೇ ಸತ್ಯ. ರಾಮಾನುಜರು. ಶಂಕರಾಚಾರ್ಯರಂತೆ ಜಗತ್ತನ್ನು ಕಾಲ್ಪನಿಕ. ಅಸತ್ಯ ಎಂದು ಅಂಗೀಕರಿಸುವುದಿಲ್ಲ. ಸಂಸಾರ, ಸೃಷ್ಟಿ- ಇವು ಭ್ರಮೆ ಎಂಬುದನ್ನೂ ಅವರು ಅಂಗೀಕರಿಸುವುದಿಲ್ಲ.

ಸಾಧನ ಮಾರ್ಗ — ಈಶ್ವರನ ನಿರಂತರ ಸ್ಮರಣೆಗೆ ಯಥಾರ್ಥ ಜ್ಞಾನ ಎಂದು ಹೆಸರು. ಇದೇ ಉಪಾಸನೆ ಅಥವ ಭಕ್ತಿ. ಪರಮಾತ್ಮ ಪ್ರಾಪ್ತಿಗೆ ಭಕ್ತಿ ಮುಖ್ಯ ಸಾಧನ. ಇದರ ಪ್ರಾಪ್ತಿಗಾಗಿ, ವೈದಿಕ ಕರ್ಮಾನುಷ್ಠಾನ ಅಗತ್ಯ ಮತ್ತು ಸಹಾಯಕ. ಶಂಕರಾಚಾರ್ಯರು ಕೇವಲ ಜ್ಞಾನಮಾರ್ಗವೇ ಉಪಾದೇಯ ಎಂದು ತಿಳಿಸಿದರೆ, ರಾಮಾನುಜರು, ಜ್ಞಾನ ಕರ್ಮ ಸಮನ್ವಯ, ಅಂದರೆ, ಕರ್ಮದಿಂದ ಉಪಲಬ್ಧವಾದ ಜ್ಞಾನರೂಪ ಭಕ್ತಿಯು ಶ್ರೇಷ್ಠ ಉಪಾಯ ಎಂದು ತಿಳಿಸುತ್ತಾರೆ.



ಭಕ್ತಿಯಿಂದ ಪ್ರಸನ್ನನಾದ ಈಶ್ವರನು ಜೀವನ ಸಮಸ್ತ ಬಂಧಗಳನ್ನೂ, ಕ್ಲೇಶ ಗಳನ್ನೂ ನಾಶಮಾಡುತ್ತಾನೆ. ಆಗ ಅವನಿಗೆ ಬ್ರಹ್ಮಜ್ಞಾನ ಮೂಡುತ್ತದೆ. ಪ್ರಪತ್ತಿಯು ಭಕ್ತಿಯ ಶ್ರೇಷ್ಠವಾದ ಅಂಗ. ಈಶ್ವರನ ಅನುಕಂಪ, ಅನುಗ್ರಹ ಸಂಪಾದನೆಗೆ ಇದು ಅತಿಮುಖ್ಯ. ಇದೇ ಶರಣಾಗತಿ, ಪರಮಾ ತ್ಮನೇ ಗತಿ, ಇನ್ನಾರೂ ಇಲ್ಲ, ಎಂದು ಜೀವನು, ಅನನ್ಯಗತಿಕನಾಗಿ ಮಹಾ ವಿಶ್ವಾಸ ದಿಂದ ಪ್ರಾರ್ಥಿಸಿದರೆ, ಅವನು ಭಗವತ್ಕೃಪೆಗೆ ಪಾತ್ರನಾಗಿ ಮೋಕ್ಷ ಪಡೆಯುವನು. ಸರ್ವಜ್ಞತ್ವ, ಸತ್ಯಸಂಕಲ್ಪಾದಿ ಗುಣಗಳು ಮುಕ್ತನಲ್ಲಿ ಉಂಟಾಗಿ, ಸದಾ ಪರಮಾತ್ಮನ ಕೈಂಕರ್ಯದಲ್ಲಿ ಅವನು ನಿರತನಾಗುವನು.

ವಿಶಿಷ್ಟಾದ್ವೈತ ದರ್ಶನದಲ್ಲಿ ಪರಮಾತ್ಮ ತತ್ತ್ವವು ಲಕ್ಷ್ಮೀನಾರಾಯಣರೆಂಬ ಎರಡು ವಸ್ತುವಾಗಿದ್ದರೂ ಒಂದೇ ವಸ್ತುವೆಂದು ಪರಿ ಗಣಿಸಲಾಗಿದೆ. ಇವನನ್ನೇ ಪರಬ್ರಹ್ಮ, ಪರಮಾತ್ಮ, ಸರ್ವೇಶ್ವರ,ಎಂದು ಕರೆಯುವುದು ರೂಢಿಯಲ್ಲಿದೆ. ಇಂತಹ ಪರಬ್ರಹ್ಮನು ಸಕಲ ತತ್ತ್ವಗಳಿಗೂ ಧಾರಕನು, ನಿಯಾಮಕನು, ಸ್ವಾಮಿ, ಶರೀರಿ, ಕಾರಣನು, ದೋಷರಹಿತನು, ಸರ್ವಜ್ಞನು, ಸರ್ವಶಕ್ತನು, ಪರಮಕಾರಣಿಕನು, ಸಕಲ ಕಲ್ಯಾಣ ಗುಣ ಪರಿಪೂರ್ಣನು, ಸರ್ವವಸ್ತು ವಿಲಕ್ಷಣನು, ಸರ್ವ ಶಬ್ದವಾಚ್ಯನು, ಅಪ್ರಾಕೃತ ದಿವ್ಯಮಂಗಳ ವಿಗ್ರಹನು, ಸರ್ವಶಾಸ್ತ್ರ ವಿಹಿತನು, ಸರ್ವ ಕರ್ಮಸಮಾರಾಧ್ಯನು, ಸಕಲ ಫಲಪ್ರದನು, ಸರ್ವಸಮಾಶ್ರಯಣೀಯನು, ಪಿತೃಮಾತೃ ಸ್ಥಾನೀಯನು, ಪರಮಾನಂದ ಸ್ವರೂಪನು, ಪರಮಪ್ರಾಪ್ಯನು, ಪರಮಪ್ರಾಪ್ಯಕನು — ಇತ್ಯಾದಿ ಸ್ವಭಾವವುಳ್ಳವನೆಂದು ಶಾಸ್ತ್ರ ಗಳು ತಿಳಿಸುತ್ತವೆ. ಇಂತಹ ಪರಮಾತ್ಮ ಸ್ವರೂಪಿಯಾದ ಸರ್ವೇಶ್ವರನು, ಶ್ರೀ ಭೂ, ನೀಳಾ ಸಮೇತನಾಗಿ, ದಿವ್ಯಾಭರಣ ಭೂಷಿತ ನಾಗಿ, ದಿವ್ಯಾಯುಧ ಸಮೇತನಾಗಿ, ನಿತ್ಯಮುಕ್ತರೊಡನೆ ಶ್ರೀ ವೈಕುಂಠದಲ್ಲಿ ಪ್ರಕಾಶಿಸುತ್ತಿದ್ದಾನೆ. ಮುಕ್ತಜೀವರ ಅವರ ಸಂಪ್ರೀತ್ಯೆಯಲ್ಲಿ ನಿರತನಾಗಿರುವರು. ಇದು ಈ ದರ್ಶನದ ಮುಖ್ಯ ವೈಶಿಷ್ಟ್ಯ ವಾಗಿದೆ.

# ಯುವವಾಣಿ

# ಯುವಶಕ್ತಿಗೊಂದು ಮಾರ್ಗ

ಬಾಳಿನಲ್ಲಿ ಯೌವನವು ಒಂದು ಪರ್ವ ಕಾಲ. ಈ ಸುವರ್ಣಕಾಲವನ್ನು ಸರಿಯಾಗಿ ಬಳಸಿಕೊಂಡರೆ ಉನ್ನತಿ ಸಾಧ್ಯ. "ಶರೀರಮಾದ್ಯಂ ಖಲು ಧರ್ಮಸಾಧನಂ" ಎಂಬ ಸೂಕ್ತಿಯಂತೆ, ಯುವಕರು ದೇಹ ಶಕ್ತಿಯನ್ನು ಧರ್ಮ ಸಾಧನೆಗೆ ಬಳಸಬೇಕು.

ಯುವಕರು ಹಕ್ಕುಗಳಿಗಿಂತಲೂ ಹೆಚ್ಚಾಗಿ ಜವಾಬ್ದಾರಿಯನ್ನು ಬಯಸುವ ಬಲ್ಲಾಳುಗಳಾಗಬೇಕು. ಮನಸ್ಸನ್ನು ತೆರೆದುಕೊಂಡೇ ಬೆಳೆಯುತ್ತಿರಬೇಕು. ಮುಪ್ಪು ಮಾಗಿಕಾಲವಾದರೆ ಯೌವನವು ಸಿರಿಸುಗ್ಗಿ. ಈ ಸುಗ್ಗಿ ಕಾಲದಲ್ಲಿ ಶ್ರೇಷ್ಠ ಬುದ್ಧಿಯನ್ನು ಬೆಳೆಸಿಕೊಂಡರೆ, ಲೋಕವೇ ಮಣಿಯುವುದು.

ಯುವಕರ ದೃಷ್ಟಿ ವಿಶಾಲವಾಗಬೇಕು ಬೆಳಕು ಗಾಳಿ ಎಲ್ಲೆಲ್ಲಿಂದ ಬರುವವೋ ಅಲ್ಲಿಂದೆಲ್ಲಾ ಅವನ್ನು ನಮ್ರತೆಯಿಂದ, ಸ್ವಾಗತಿಸಿ ನಮ್ಮ ಸಂಸ್ಕೃತಿಯನ್ನು, ತೇಜಸ್ಸನ್ನು ಬೆಳೆಸಿಕೊಳ್ಳಬೇಕು. ಗುಣವಿದ್ದಲ್ಲಿ ಗಾತ್ರವನ್ನು ಬಯಸದೆ ವರ್ಚಸ್ಸಿದ್ದಲ್ಲಿ ವೇಷಭೂಷೆಗಳನ್ನು ಕೇಳಬಾರದು.

ಯುವಕರು 'ದೈವೀ ಸಂಪತ್ತಿನ ಗುಣ'ಗಳನ್ನು ಬೆಳೆಸಿಕೊಳ್ಳಬೇಕು. ದೈವೀ ಸಂಪತ್ತಿನ ಬಗ್ಗೆ 'ಭಗವದ್ ಗೀತೆ'ಯಲ್ಲಿ ಶ್ರೀಕೃಷ್ಣ ಅರ್ಜುನನಿಗೆ ಹೀಗೆ ಹೇಳುತ್ತಾನೆ-

ಅಭಯಂ ಸತ್ತ್ವಸಂಶುದ್ಧಿಃ
ಜ್ಞಾನಯೋಗವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ
ಸ್ವಾಧ್ಯಾಯಸ್ತಪ ಆರ್ಜವಮ್ ॥

ಅಹಿಂಸಾ ಸತ್ಯಮಕ್ರೋಧ
ಸ್ತ್ಯಾಗಃ ಶಾಂತಿರಪೈಶುನಮ್ ।
ದಯಾ ಭೂತೇಷ್ವ ಲೋಲುಪ್ತ್ವಂ
ಮಾರ್ದವಂ ಹ್ರೀರಚಾಪಲಮ್ ॥

ತೇಜಃ ಕ್ಷಮಾ ಧೃತಿಃ
ಶೌಚ ಮದ್ರೋಹೋ ನಾತಿಮಾನಿ ತಾ ।
ಭವಂತಿ ಸಂಪದಂ ದೈವೀಂ
ಅಭಿಜಾತಸ್ಯ ಭಾರತ ॥

ನಿರ್ಭಯತೆ, ಸತ್ತ್ವಸಂಶುದ್ಧಿ, ಜ್ಞಾನಯೋಗ, ವ್ಯವಸ್ಥಿತಿ, ದಾನ, ಯಜ್ಞ, ವೇದಾಧ್ಯಯನ, ತಪಸ್ಸು, ಸರಳತೆ, ಅಹಿಂಸೆ, ಸತ್ಯ ಅಕ್ರೋಧ, ತ್ಯಾಗ, ಶಾಂತಿ, ಚಾಡಿಯನ್ನು ಹೇಳದಿರುವುದು, ಭೂತದಯೆ, ಇಂದ್ರಿಯ ನಿಗ್ರಹ, ಮೃದುಸ್ವಭಾವ, ನಾಚಿಕೆ, ಚಪಲವಿಲ್ಲದೆ ಇರುವುದು, ತೇಜಸ್ಸು, ಕ್ಷಮೆ, ಧೈರ್ಯ, ಶೌಚ, ದ್ರೋಹ ಮಾಡದೆ ಇರುವುದು, ಅಭಿಮಾನ ಇಲ್ಲದೆ ಇರುವುದು- ಇವು ದೈವೀ ಸಂಪತ್ತಿನ ಗುಣಗಳು.

ಯುವಜನತೆ ಮೇಲೆ ಶ್ರೀ ವಿವೇಕಾನಂದರಿಗೆ ತುಂಬಾ ಭರವಸೆ ಇತ್ತು. ಅವರು ಒಮ್ಮೆ "ನೂರು ಜನ ಸ್ವಾರ್ಥರಹಿತ ಯುವಕರನ್ನು ಕೊಡಿ, ಇಡೀ ವಿಶ್ವವನ್ನೇ ಪರಿವರ್ತನೆ ಮಾಡುತ್ತೇನೆ" ಎಂದರು. ಡಾ|| ಜಿ. ಪಿ. ರಾಜರತ್ನಂ ಅವರು ಯುವಕರಿಗೆ ಒಂದು ಕಿವಿಮಾತು ಹೇಳಿದ್ದಾರೆ-

ಯೌವನದ ಕಾಲದಲಿ
ಮೌನವೇ ಮೇಲು,
ಅಹುದು ಅಹುದು ಮಗು !
ಮೌನವೇ ಗೌರವದ ಕೀಲು

ಯುವಕರು, ನಕಲು ಬುದ್ಧಿಯಶಿಕ್ಷಣ ಪಡೆಯದೆ ಗೌರವಾನ್ವಿತ ಬಾಳನ್ನು ಬಾಳಬೇಕು. ಇಲ್ಲಿ ಡಾ| ಡಿ. ವಿ. ಜಿ. ಅವರ ಮಂಕುತಿಮ್ಮನ ಕಗ್ಗದಿಂದ-ಬಿಡಿ ಪದ್ಯವೊಂದನ್ನು ಸ್ಮರಿಸೋಣ-

ಗೌರವಿಸು ಜೀವನವ ಗೌರವಿಸು ಚೇತನವ
ಆರದೋ ಜಗವೆಂದು ಭೇದವೆಣಿಸದಿರು ।
ಹೋರುವುದೆ ಜೀವನ ಸಮೃದ್ಧಿಗೋಸುಗ ನಿನಗೆ
ದಾರಿಯಾತ್ಮೋನ್ನತಿಗೆ-ಮಂಕುತಿಮ್ಮ ॥

ಇಂದಿನ ಯುವಜನತೆಗೆ-ಆದರ್ಶವ್ಯಕ್ತಿಗಳು ಯಾರು ? ಎಂದರೆ ಐತಿಹಾಸಿಕ ಪುರುಷರು. ಧೀರರೂ ಆಧ್ಯಾತ್ಮಿಕ ಮಹಾಪುರುಷರೂ ದೇಶಭಕ್ತಿಯ ರಾಜಕಾರಣಿಗಳನ್ನು ಯುವಜನತೆಗೆ ಪರಿಚಯಿಸುವವರೇ ಕಡಿಮೆ ಈ ಕಾರಣಗಳಿಂದ ಯುವಶಕ್ತಿಯ ಪ್ರವಾಹ ನಿರರ್ಥಕವಾಗಿ ಹರಿದು ಹೋಗುತ್ತಿದೆ.

ಇಂದು ಯುವಜನತೆ ಕೇವಲ ಕ್ಷಣಿಕ ಆನಂದ ಪ್ರಿಯರಾಗಿದ್ದಾರೆ, ಯುವಕರಿಗೆ. ಮಾರ್ಗದರ್ಶನ ನೀಡುವ ಹಿರಿಯರೇ-ಅಡ್ಡದಾರಿ ಹಿಡಿದಿರುವುದು ಶೋಚನೀಯ ಸ್ಥಿತಿಯೇ ಸರಿ!

ಒಂದು ಉದಾಹರಣೆಯನ್ನು ಪರೀಶೀಲಿಸೋಣ. ಒಬ್ಬ ಯುವಕ, ಮಾವಿನ ಮರದ ಚಿಗುರಿದ ಕೊಂಬೆಗಳಿಗೆಲ್ಲಾ, ಮನೆಯ ಪಾಳಿಯ ಮೇಲೆ ನಿಂತುಕೊಂಡು ನೀರು ಎರೆಯುತ್ತಿದ್ದ. ದಿನವೂ ತಪ್ಪದೆ ಈ ಕೆಲಸವನ್ನು ಮಾಡುತ್ತಿರುವುದನ್ನು ಕಂಡು ವೃದ್ಧನೊಬ್ಬ "ಇದೇಕಪ್ಪ, ಕೊಂಬೆಗೆ ನೀರು ಎರೆಯುತ್ತೀಯೆ ? ಬುಡಕ್ಕೇಕೆ ನೀರು ಹಾಕುವುದಿಲ್ಲ?'' ಎಂದು ಕೇಳಿದ್ದಕ್ಕೆ, ಆ ಯುವಕ "ಹಣ್ಣು ಕೊಂಬೆಯಲ್ಲಿ ಅಲ್ಲವೇ ಬಿಡುವುದು, ಬುಡಕ್ಕೇಕೆ ನೀರು'' ಎಂದನಂತೆ, ......... ನಮ್ಮಲ್ಲನೇಕರು ಈ ಅವಿವೇಕದ ಕೆಲಸವನ್ನು ಮಾಡುತ್ತಿದ್ದೇವೆ, ನಮ್ಮ ಜೀವನ ವೃಕ್ಷವು ಚಿಗುರಿ, ಪಲ್ಲವಿಸಿ, ಹೂವಾಗಿ ಹಣ್ಣು ಬಿಡುವುದು ಜೀವನದ ಮೇಲುಗಡೆಯೇ ಸರಿ, ಆದರೆ ಅದರ ಬೇರು ಕಾಣಿಸದಂತೆ ಒಳಗೆ ಹುದುಗಿಕೊಂಡು ಬಿಟ್ಟಿದೆ, ನಮ್ಮ ಮನಸ್ಸಿನಲ್ಲಿ ಶುಭಭಾವನೆಗಳೆಂಬ ಬೇರುಗಳಿದ್ದರೆ, ಶುಭ ಫಲಗಳು ಜೀವನದಲ್ಲಿ ಕಾಣಿಸಿಕೊಳ್ಳುತ್ತವೆ. ಶುಭ ಭಾವನೆಗಳಿಗೆ ತಾಯಿಬೇರಾದ ಸುಸಂಸ್ಕೃತಿ

**ಮತ್ತೀಗೆರೆ ಅನಂತು**

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

ಸನ್ಮಾರ್ಗ, ವೈಜ್ಞಾನಿಕ ತಿಳುವಳಿಕೆ, ತಿಳಿದು ನಡೆದರೆ, ಬೇರಿಗೆ ನೀರೆರೆದಂತೆ ಯುವಜನತೆಯು ಉದ್ಧಾರವಾಗುವುದು.

ಯುವಜನತೆ ಕ್ರಿಯಾತ್ಮಕ, ಸೃಜನಾತ್ಮಕ ಬುದ್ಧಿಯನ್ನು ಬೆಳೆಸಿಕೊಳ್ಳಬೇಕು. ಈ ಸಂದರ್ಭದಲ್ಲಿ ಕಾಳಿದಾಸ ಕವಿ ನುಡಿಮುತ್ತೊಂದನ್ನು ಸ್ಮರಿಸಬಹುದು, "ಮೂಢಃ ಪರಪ್ರತ್ಯಯನೇಯ ಬುದ್ಧಿಃ" ಅಂದರೆ ಇತರರ ಅಭಿಪ್ರಾಯದಂತೆ ಎಳೆಯಲ್ಪಡುವ ಬುದ್ಧಿಯುಳ್ಳವನು ಮೂರ್ಖ. ಯುವಕರು ಯುಕ್ತಾಯುಕ್ತ ಪರಿಜ್ಞಾನ ಬೆಳೆಸಿಕೊಳ್ಳಬೇಕು. ಇಲ್ಲವಾದರೆ ಇಂದ್ರಿಯ ವಿಷಯದ ಭ್ರಾಂತಿ, ದಾಸ್ಯದ ಬಂಧನದಲ್ಲಿ ಸಿಲುಕಬೇಕಾಗಬಹುದು.

ಯುವಕರಲ್ಲಿ – ವಿದ್ಯಾರ್ಥಿಗಳು, ನಿರೋದ್ಯೋಗಿಗಳು, ಹಾಗೂ ಉದ್ಯೋಗಸ್ಥರು ಎಂಬುದಾಗಿ ವಿಭಾಗಿಸಬಹುದು. ಇವರಲ್ಲಿ ಲಘುಚಿತ್ತವೃತ್ತಿ ಬೆಳೆದು–ಬೆಳೆದು–ವಿಲಾಸಪ್ರಿಯರಾಗಿದ್ದಾರೆ. ನೈತಿಕ ಸಂಪತ್ತಿನ, ಕೊರತೆ, ಸಾಮಾಜಿಕ, ಶೈಕ್ಷಣಿಕ ಕೊರತೆ, ಆಳವಾದ ಚಿಂತನೆಯ ಕೊರತೆಯಿಂದಾಗಿ, ಹಿಂದಿನ ಕಾಲದವರ ಸಂಪ್ರದಾಯಕ್ಕೂ– ಇಂದಿನ ಕಾಲದ ಯುವಪೀಳಿಗೆಗೂ – ಕಂದಕವಾಗಿ ಬಿಟ್ಟಿದೆ.

ಯೌವನಕಾಲದಲ್ಲಿ ಆಕರ್ಷಣೆ, ಆಸೆ ಆಕಾಂಕ್ಷೆಗಳು, ಧೈರ್ಯ, ಚಂಚಲತೆ, ಉತ್ಸಾಹ, ಹುರುಪು, ಕೆಚ್ಚು, ಕಸುವು, ಎದೆಗಾರಿಕೆ, ಮೊಂಡುತನ, ಸಾಧಿಸುವ ಛಲ ಇರುತ್ತದೆ. ಇವನ್ನೆಲ್ಲಾ ವಿವೇಕದಿಂದ ವಿವೇಚಿಸಿ, ಬದುಕಿಗೆ ಬೇಡವಾದದ್ದನ್ನು ಬಿಟ್ಟು ಬೆಳಕಿನ ಮಾರ್ಗವನ್ನು ಅನುಸರಿಸಿದರೆ – ಅಂದೇ ಯುವಜನತೆಯ ಬಾಳ್ವೆ ಭವ್ಯವಾಗುತ್ತದೆ.

ಯುವಕರು ಸ್ವಭಾವಸಿದ್ಧವಾದ ಸ್ವಾತಂತ್ರ್ಯವನ್ನು ಕಂಡುಕೊಳ್ಳಬೇಕು. ಜ್ಞಾನವೆಲ್ಲಾ ನಮ್ಮಲ್ಲೇ ಇರುವುದು, ಪೂರ್ಣತೆ ಆತ್ಮನಲ್ಲೇ ಇರುವುದು, ಪ್ರಕೃತಿ ಈ ಪರಿಪೂರ್ಣತೆಯನ್ನು ಮುಚ್ಚಿರುವುದು, ಈ ಮುಸುಕನ್ನು ತೆಗೆದು ಹಾಕಿ, ನಮ್ಮ ಆತ್ಮಶಕ್ತಿಯನ್ನು ಕಂಡುಕೊಳ್ಳಬೇಕು. ಆಗ ನಮ್ಮ ಏಳ್ಗೆಗೆ ನಾವೇ ಶಿಲ್ಪಿಗಳಾಗುತ್ತೇವೆ.

ಯುವಜನತೆಯ ಉದ್ಧಾರಕ್ಕೆ ಮೂರು ಮುಖ್ಯ ಅಂಶಗಳನ್ನು ಅನುಸರಿಸಬೇಕು. ಒಂದು–ಒಳ್ಳೆಯತನವನ್ನು ಗುರುತಿಸಿ ಗೌರವಿಸುವುದು, ಎರಡು – ಸಂದೇಹ, ಹೊಟ್ಟೆಕಿಚ್ಚನ್ನು ಬಿಡುವುದು, ಕೊನೆಯದಾಗಿ ಸನ್ಮಾರ್ಗದಲ್ಲಿ ನಡೆಯುವುದು.

ಯುವಜನತೆ ಹೇಗಿರಬೇಕು ? ಎಂದಾಗ ತೈತ್ತಿರೀಯೋಪನಿಷತ್‌ನ 8ನೆಯ ಅನುವಾಕದಲ್ಲಿರತಕ್ಕ ಮಂತ್ರ ಒಂದನ್ನು ಉದ್ಧರಿಸಬಹುದು –

ಯುವಾ ಸ್ಯಾತ್ ಸಾಧು
ಯುವಾಧ್ಯಾಯಕಃ ।
ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ ।
ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ
ಪೂರ್ಣಾ ಸ್ಯಾತ್ ।
ಸ ಏಕೋ ಮಾನುಷ ಆನಂದಃ ॥

**ತಾತ್ಪರ್ಯ** – ವೇದಾಧ್ಯಯನ ಸಂಪನ್ನನೂ, ಅತ್ಯಂತವಾಗಿ ಆಶೆಯುಳ್ಳವನೂ, ದೃಢತಮನೂ, ಬಲಿಷ್ಠನೂ, ಐಶ್ವರ್ಯದಿಂದ ಪೂರ್ಣವಾದ ಪೃಥ್ವಿಯೆಲ್ಲವನ್ನೂ ಹೊಂದಿರುವವನೂ ಆದ ಒಬ್ಬ ಒಳ್ಳೆಯ ಯುವಕನಿರಲಿ, ಅವನ ಆನಂದವು ಮನುಷ್ಯರ ಒಂದು ಆನಂದ...... ಇಂಥಹ ನೂರು ಆನಂದಗಳೇ ಮುಂದೆ ಬ್ರಹ್ಮನ ಆನಂದವೆನಿಸುತ್ತದೆ.



# ಕಿಶೋರ ಜಗತ್



# ಕೌಶಿಕ ಬ್ರಹ್ಮರ್ಷಿಯಾದ ಕಥೆ

ವಿಶ್ವಾಮಿತ್ರ ಒಬ್ಬ ಬ್ರಹ್ಮರ್ಷಿ. ಆತ ಬ್ರಹ್ಮರ್ಷಿಯಾಗಿದ್ದೂ ಒಂದು ದೊಡ್ಡ ಕಥೆ.

ಹಿಂದೆ ಆತ ಒಬ್ಬ ರಾಜನಾಗಿದ್ದ. ಅವನ ಹೆಸರು ಕೌಶಿಕ. ಒಮ್ಮೆ ಬೇಟೆಯಾಡಲು ಕಾಡಿಗೆ ಹೋದ. ಬೇಟೆ ಮುಗಿಸಿ ಹಿಂದಿರುಗುತ್ತಿದ್ದಾಗ ಒಂದು ಆಶ್ರಮ ಕಂಡಿತು. ಅದು ವಸಿಷ್ಠರ ಆಶ್ರಮ. ಋಷಿಗಳಿಗೆ ನಮಸ್ಕರಿಸಿ ಹೋಗೋಣವೆಂದು ಕೌಶಿಕ ಆಶ್ರಮದೊಳಕ್ಕೆ ಹೋದ. ವಸಿಷ್ಠರಿಗೆ ಪಾದಮುಟ್ಟಿ ನಮಸ್ಕಾರ ಮಾಡಿದ. ವಸಿಷ್ಠರು ಆಶೀರ್ವದಿಸಿದರು.

ರಾಜ ಬಹಳ ಬಳಲಿದ್ದ. ಅವನ ಪರಿವಾರಕ್ಕೂ ಆಯಾಸವಾಗಿತ್ತು. ಇನ್ನೂ ಬಹಳ ದೂರ ಪ್ರಮಾಣ ಮಾಡಬೇಕಾಗಿತ್ತು. ವಸಿಷ್ಠರಿಗೆ ರಾಜನಿಗೂ ಅವನ ಪರಿವಾರಕ್ಕೂ ಆತಿಥ್ಯ ಮಾಡಬೇಕು ಎನಿಸಿತು. ರಾಜನಿಗೆ ವಿಶ್ರಾಂತಿ ತೆಗೆದುಕೊಳ್ಳುವಂತೆ ಹೇಳಿದರು. ತಮ್ಮ ಆಶ್ರಮದಲ್ಲಿದ್ದ ಶಬಲೆ ಎಂಬ ಗೋವನ್ನು ಕರೆದರು.

ಶಬಲೆ ದೇವಲೋಕದ ಕಾಮಧೇನು. ಬೇಕುಬೇಕಾದ ಆಹಾರಗಳನ್ನು ಕೊಡುತ್ತಿತ್ತು. ವಸಿಷ್ಠರು ಶಬಲೆಗೆ ಹೇಳಿ ಔತಣವನ್ನೇರ್ಪಡಿಸಿದರು. ರಾಜನಿಗೂ ಅವನ ಪರಿವಾರಕ್ಕೂ ಮೃಷ್ಟಾನ್ನಭೋಜನ ನಡೆಯಿತು.

ಕೌಶಿಕ ರಾಜನಿಗೆ ಆಶ್ಚರ್ಯ. 'ಒಂದು ಹಸುವು ಇಷ್ಟೆಲ್ಲ ಆಹಾರಗಳನ್ನು ಸರಬರಾಜು ಮಾಡುವುದಲ್ಲ' ಎಂದು. ಆ ಹಸುವನ್ನು ಪಡೆಯುವ ಆಸೆ ಆಯಿತು. 'ಶಬಲೆಯನ್ನು ನನಗೆ ಕೊಡಿ' ಎಂದು ವಸಿಷ್ಠರನ್ನು ಬೇಡಿದ. ಆದರೆ ವಸಿಷ್ಠರು ಶಬಲೆಯನ್ನು ಕೊಡಲು ಒಪ್ಪಲಿಲ್ಲ. ರಾಜನು "ಶಬಲೆಯ ಬದಲು ನೂರಾರು ಹಸುಗಳನ್ನು ಕೊಡುತ್ತೇನೆ. ನೀವು ಕೇಳಿದಷ್ಟು ಹಣವನ್ನು ಕೊಡುತ್ತೇನೆ. ದಯವಿಟ್ಟು ಶಬಲೆಯನ್ನು ನನಗೆ ಕೊಡಿ" ಎಂದ. ವಸಿಷ್ಠರು "ಖಂಡಿತ ಸಾಧ್ಯವಿಲ್ಲ" ಎಂದುಬಿಟ್ಟರು.

ಕೌಶಿಕನಿಗೆ ಕೋಪ ಬಂದಿತು. ಹಸುವನ್ನು ಬಲಾತ್ಕಾರವಾಗಿ ಹಿಡಿದುಕೊಳ್ಳುವಂತೆ ತನ್ನ ಸೈನಿಕರಿಗೆ ಅಪ್ಪಣೆ ಮಾಡಿದ. ಅವನ ಸೈನಿಕರು ಶಬಲೆಯನ್ನು ಕಟ್ಟಿ ಹಾಕಲು ಪ್ರಯತ್ನಿಸಿದರು. ಇದ್ದಕ್ಕಿದ್ದಂತೆ ಶಬಲೆ ಒಮ್ಮೆ ಮೈಕೊಡವಿತು. ಸೈನಿಕರೆಲ್ಲ ಚದುರಿ ದೂರದಲ್ಲಿ ಬಿದ್ದರು. ಕೌಶಿಕನ ಸೈನಿಕರು ಮತ್ತೆ ಹೆಚ್ಚಿನ ಸಂಖ್ಯೆಯಲ್ಲಿ ಬಂದು ಶಬಲೆಯನ್ನು ಹಗ್ಗಗಳಿಂದ ಕಟ್ಟಿ ಹಾಕಲು ಯತ್ನಿಸಿದರು. ಆಗ ಶಬಲೆ "ಅಂಬಾ" ಎಂದಿತು. ಕೂಡಲೇ ಎಲ್ಲೆಲ್ಲಿಂದಲೋ ಸಾವಿರಾರು ಜನ ಕಟ್ಟಾಳುಗಳು ಶಸ್ತ್ರಗಳನ್ನು ಹಿಡಿದುಕೊಂಡು ಬಂದು ಕೌಶಿಕನ ಸೈನಿಕರನ್ನು ಸೋಲಿಸಿ ಓಡಿಸಿದರು.

ಕೌಶಿಕನಿಗೆ ಬಹಳ ಅವಮಾನವಾಯಿತು. "ತನ್ನಂತಹ ಪರಾಕ್ರಮಿ ರಾಜನೊಬ್ಬ ಒಬ್ಬ ಋಷಿಯ ಆಶ್ರಮದ ಹಸುವಿನಿಂದ ಸೋಲನ್ನು ಅನುಭವಿಸಬೇಕಾಯಿತೇ" ಎಂದು ದುಃಖವಾಯಿತು. 'ಇದಕ್ಕೆ ತಕ್ಕ ಪ್ರತೀಕಾರ ಮಾಡದೇ ಬಿಡುವುದಿಲ್ಲ' ಎಂದು ನಿಶ್ಚಯಿಸಿದ.

ರಾಜಧಾನಿಗೆ ಹಿಂತಿರುಗಿ ತನ್ನ ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿ, ಹಿಮಾಲಯಕ್ಕೆ ಹೋದ. ಹಿಮಾಲಯದಲ್ಲಿ ಘೋರವಾದ ತಪಸ್ಸನ್ನು ಮಾಡಿದ. ಶಿವನು ಕೌಶಿಕನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದ. "ನಿನ್ನಿಚ್ಛೆ ಬಂದ ವರವನ್ನು ಕೇಳಿಕೊ" ಎಂದ. ಕೌಶಿಕನ ಗುರಿ ಇದ್ದುದು ಒಂದೇ. ವಸಿಷ್ಠರನ್ನು ಸೋಲಿಸುವುದು. ಅದಕ್ಕಾಗಿ ಪ್ರಬಲವಾದ ಅಸ್ತ್ರಗಳನ್ನು ಬೇಡಿದ. ಶಿವ ಅಸ್ತ್ರಗಳನ್ನು ಅವನಿಗೆ ದಯಪಾಲಿಸಿದ.

ಹೊಸ ಹೊಸ ಅಸ್ತ್ರಗಳನ್ನು ಸಂಪಾದಿಸಿಕೊಂಡು ಕೌಶಿಕ ಮತ್ತೆ ವಸಿಷ್ಠರ ಆಶ್ರಮಕ್ಕೆ ಬಂದ. ಒಂದೇ ಬಾಣದಿಂದ ಆಶ್ರಮಕ್ಕೆ ಬೆಂಕಿ ಹಚ್ಚಿದ. ಧಗಧಗನೆ ಉರಿಯುತ್ತಿದ್ದ ಬೆಂಕಿಯನ್ನು ನೋಡಿ ವಸಿಷ್ಠರ ಶಿಷ್ಯರಿಗೆ ಭಯವಾಯಿತು. ವಸಿಷ್ಠರು ಅವರನ್ನು ಸಮಾಧಾನ ಪಡಿಸಿದರು. ತಮ್ಮ ಬ್ರಹ್ಮದಂಡವನ್ನು ಮುಂದಿಟ್ಟುಕೊಂಡು ಕುಳಿತರು.

ಕೌಶಿಕ ಒಂದರ ಮೇಲೊಂದರಂತೆ ಅಸ್ತ್ರಗಳನ್ನು ಪ್ರಯೋಗಿಸುತ್ತಾ ಬಂದ. ಆದರೆ ಏನಾಶ್ಚರ್ಯ! ಎಲ್ಲ ಅಸ್ತ್ರಗಳನ್ನೂ ವಸಿಷ್ಠರ ಬ್ರಹ್ಮದಂಡ ನುಂಗುತ್ತಾ ಬಂದಿತು. ವಸಿಷ್ಠರಿಗಾಗಲೀ ಅವರ ಆಶ್ರಮಕ್ಕಾಗಲೀ ಸ್ವಲ್ಪವೂ ಧಕ್ಕೆಯಾಗಲಿಲ್ಲ.

ಎಳೆಯರ ರಾಮಾಯಣದಿಂದ–

**ಶ್ರೀ ಮೈ. ನ. ನಾಗರಾಜ**

ಕೌಶಿಕನ ಅಸ್ತ್ರಗಳ ಸರಕು ಮುಗಿಯುತ್ತಾ ಬಂತು. ಅವನ ಬಳಿ ಇದ್ದುದು ಇನ್ನೊಂದೇ ಅಸ್ತ್ರ. ಅದು ಬ್ರಹ್ಮಾಸ್ತ್ರ. ಅದು ಅಸ್ತ್ರಗಳಲ್ಲೆಲ್ಲಾ ಅತಿ ಪ್ರಬಲವಾದದ್ದು. ಅದನ್ನು ಪ್ರಯೋಗಿಸಿದರೆ ಇಡೀ ಲೋಕವೇ ಸುಟ್ಟುಹೋಗುವುದು. ಕೌಶಿಕ ಬ್ರಹ್ಮಾಸ್ತ್ರವನ್ನು ಬಿಟ್ಟಾಗ ಮೂರು ಲೋಕದವರೂ ಭಯಗೊಂಡರು. 'ವಿಶ್ವದ ವಿನಾಶವಾಗುತ್ತದಲ್ಲ' ಎಂದು ದುಃಖಪಟ್ಟರು. ಆದರೆ ಬ್ರಹ್ಮದಂಡ ಅದನ್ನೂ ಬಿಡಲಿಲ್ಲ. ಬ್ರಹ್ಮಾಸ್ತ್ರವನ್ನೂ ನುಂಗಿ ಹಾಕಿತು.

ಕೌಶಿಕ ಈಗ ತೀರಾ ಹತಾಶನಾದ. 'ಬ್ರಹ್ಮಬಲದ ಮುಂದೆ ತನ್ನ ಬಲ ಉಪಯೋಗ ಇಲ್ಲ' ಎನಿಸಿತು. 'ತಾನೂ ಬ್ರಹ್ಮ ಬಲವನ್ನು ಸಂಪಾದಿಸಲೇಬೇಕು' ಎಂದುಕೊಂಡ. ಅದಕ್ಕಾಗಿ ತಪಸ್ಸು ಮಾಡಲು ಹೊರಟ.

ಮತ್ತೆ ಅನೇಕ ವರ್ಷಗಳ ಕಾಲ ತಪಸ್ಸು ಮಾಡಿದ. ಬ್ರಹ್ಮ ಪ್ರತ್ಯಕ್ಷನಾಗಿ "ಕೌಶಿಕ, ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ಇನ್ನು ಮೇಲೆ ನೀನು 'ರಾಜಋಷಿ' ಎಂದ. ಇದರಿಂದ ಕೌಶಿಕನಿಗೆ ಸಮಾಧಾನವಾಗಲಿಲ್ಲ. ಅವನಿಗೆ ಬ್ರಹ್ಮರ್ಷಿ ಆಗಬೇಕೆಂದು ಇಚ್ಛೆ. ಅದಕ್ಕಾಗಿ ಮತ್ತೆ ಘೋರವಾದ ತಪಸ್ಸನ್ನು ಆರಂಭಿಸಿದ.

ಇಲ್ಲಿ ಕೌಶಿಕರಾಜ ತಪಸ್ಸು ಮಾಡುತ್ತಿದ್ದಾಗ, ಅತ್ತ ಸೂರ್ಯವಂಶದ ತ್ರಿಶಂಕು ಎಂಬ ರಾಜ ದೇಶವಾಳುತ್ತಿದ್ದ. ಅವನು ಧರ್ಮದಿಂದ ರಾಜ್ಯವಾಳುತ್ತಿದ್ದ. ಒಮ್ಮೆ ಆತನಿಗೆ ಮನುಷ್ಯ ಶರೀರದಿಂದಲೇ ಸ್ವರ್ಗಕ್ಕೆ ಹೋಗಬೇಕು ಎಂದು ಆಸೆ ಆಯಿತು. ಅದಕ್ಕಾಗಿ ವಸಿಷ್ಠರಿಗೆ ತನ್ನ ಆಸೆಯನ್ನು ಹೇಳಿ ಯಾವುದಾದರೂ ಯಜ್ಞ ಮಾಡುವಂತೆ ಪ್ರಾರ್ಥಿಸಿದ. ವಸಿಷ್ಠರು 'ಮನುಷ್ಯದೇಹದಿಂದ ಸ್ವರ್ಗಕ್ಕೆ ಹೋಗುವುದು ಸಾಧ್ಯವಿಲ್ಲ' ಎಂದು ಹೇಳಿದರು. ಆದರೆ ತ್ರಿಶಂಕುವಿಗೆ ಸಮಾಧಾನವಾಗಲಿಲ್ಲ. ಅವನು ವಸಿಷ್ಠರ ಮಕ್ಕಳಾದರೂ ತನಗೆ ಸಹಾಯಮಾಡಬೇಕೆಂದೂ ಪ್ರಾರ್ಥಿಸಿದ. ತಮ್ಮ ತಂದೆಯವರೇ ಸಾಧ್ಯವಿಲ್ಲ ಎಂದ ಮೇಲೆ ತಮ್ಮನ್ನು ಬಂದು ಕೇಳುತ್ತಿರುವನಲ್ಲಾ ಎಂದು ವಸಿಷ್ಠರ ಮಕ್ಕಳಿಗೆ ಕೋಪ ಬಂತು. 'ನೀನು ಚಂಡಾಲನಾಗು' ಎಂದು ತ್ರಿಶಂಕುವಿಗೆ ಶಾಪಕೊಟ್ಟರು.

ಸುಂದರ ರೂಪದ ತ್ರಿಶಂಕು ಕೂಡಲೇ ಕುರೂಪಿಯಾದ. ಬಂಗಾರದ ಬಣ್ಣದ ಮೈ ಕಪ್ಪಗಾಯಿತು. ತಲೆಕೂದಲು ಉದುರಿಹೋಯಿತು. ಚಿನ್ನದ ಆಭರಣ ಕಬ್ಬಿಣವಾಯಿತು. ಉಟ್ಟಿದ್ದ ಬಟ್ಟೆ ಛಿದ್ರ ಛಿದ್ರವಾಯಿತು. ಅವನ ಮಂತ್ರಿಗಳೂ ಪ್ರಜೆಗಳೂ ಹೆದರಿ ಓಡಿಹೋದರು. ತ್ರಿಶಂಕು ಏಕಾಂಗಿಯಾದ.

ತ್ರಿಶಂಕುವಿಗೆ ತುಂಬಾ ದುಃಖವಾಯಿತು. ಸ್ವರ್ಗಕ್ಕೆ ಹೋಗುವ ಆಸೆ ಇದ್ದ ಆ ರಾಜ ಒಮ್ಮೆಲೇ ಚಂಡಾಲನಾದ. ಮಂತ್ರಿಗಳೂ, ಮಕ್ಕಳೂ, ಪ್ರಜೆಗಳೂ ಅವನನ್ನು ತೊರೆದರು. ಸಿಕ್ಕಿದ ಕಡೆ ಅಲೆದಾಡುತ್ತ ಒಂದು ದಿನ ಕೌಶಿಕನ ಆಶ್ರಮಕ್ಕೆ ಬಂದ. ಕೌಶಿಕನ ಬಳಿ ತನ್ನ ದುಃಖವನ್ನು ತೋಡಿಕೊಂಡ. ಕೌಶಿಕನಿಗೆ ತ್ರಿಶಂಕುವಿನ ಕಥೆಕೇಳಿ

---

ಮರುಕವಾಯಿತು. ಅವನಿಗೆ ತನ್ನ ಕೈಲಾದ ಸಹಾಯ ಮಾಡಬೇಕು ಎನಿಸಿ, 'ಮಹಾರಾಜ ನೀನು ಹೆದರಬೇಡ. ನನಗೆ ತಿಳಿದಂತೆ ನೀನು ಧರ್ಮಿಷ್ಠ, ಸತ್ಯವಂತ. ನಿನ್ನ ಗುರು ಪುತ್ರರ ಶಾಪ ಏನೇ ಇರಲಿ, ನಾನು ನಿನ್ನ ಈ ಚಂಡಾಲರೂಪ ಹೋಗುವಂತೆ ಮಾಡು ತ್ತೇನೆ. ಮನುಷ್ಯ ರೂಪದಲ್ಲೇ ನಿನ್ನನ್ನು ಸ್ವರ್ಗಕ್ಕೆ ಕಳುಹಿಸುತ್ತೇನೆ' ಎಂದನು. ತ್ರಿಶಂಕುವಿನ ಮನಸ್ಸಿಗೆ ಸಮಾಧಾನ ಆಯಿತು.

ಕೌಶಿಕನು ಇತರ ಋಷಿಗಳಿಗೆ ಹೇಳಿ ಕಳುಹಿಸಿದನು. ಹಲವಾರು ಋಷಿಮುನಿ ಗಳು ಬಂದರು. ಅವರಿಗೆ ಕೌಶಿಕನು ತ್ರಿಶಂಕುವಿನ ಕಥೆಯನ್ನು ಹೇಳಿದ. 'ನಾವೆಲ್ಲ ಸೇರಿ ಒಂದು ಯಾಗ ಮಾಡೋಣ. ತ್ರಿಶಂಕು ವನ್ನು ಸಶರೀರನಾಗಿಯೇ ಸ್ವರ್ಗಕ್ಕೆ ಕಳು ಹಿಸೋಣ' ಎಂದ. ಇತರ ಋಷಿಗಳಿಗೆ ಕೌಶಿಕನನ್ನು ಕಂಡರೆ ಒಂದು ರೀತಿಯ ಭಯ. ಅವನು ಮಹಾ ತಪಸ್ವಿ, ಹಠವಾದಿ ಎಂದು ಎಲ್ಲರಿಗೂ ಗೊತ್ತು. ಆದ್ದರಿಂದ ಅವನ ಮಾತಿಗೆ ಇದಿರಾಡದೆ ಒಪ್ಪಿದರು.

ಒಂದು ದೊಡ್ಡ ಯಾಗ ಆರಂಭ ವಾಯಿತು. ಯಜ್ಞದ ಎಲ್ಲಾ ಕಾರ್ಯ ಗಳನ್ನೂ ಶಾಸ್ತ್ರೋಕ್ತವಾಗಿ ಮಾಡಿದರು. ಕೊನೆಯ ಘಟ್ಟ ಬಂದಿತು. ಯಾಗದ ಹವಿರ್ಭಾಗವನ್ನು ಸ್ವೀಕರಿಸಲು ದೇವತೆಗಳು ಬರಬೇಕು; ಆದರೆ ಎಷ್ಟು ಹೊತ್ತಾದರೂ ದೇವತೆಗಳು ಬರಲೇ ಇಲ್ಲ.

ಕೌಶಿಕನಿಗೆ ಕೋಪ ಬಂತು. ಯಜ್ಞದ ಉಪಕರಣವನ್ನು ಕೈಯಲ್ಲಿ ಎತ್ತಿ ಹಿಡಿದು ಸಿಡಿಲಿನಂತೆ ನುಡಿದ, "ತ್ರಿಶಂಕು ಮಹಾ ರಾಜ, ದೇವತೆಗಳು ಹವಿಸ್ಸನ್ನು ಸ್ವೀಕರಿಸಲು ಬರಲಿಲ್ಲ. ಆದರೂ ಚಿಂತೆಯಿಲ್ಲ. ಇಗೋ ನನ್ನ ತಪಸ್ಸಿನ ಶಕ್ತಿಯನ್ನು ನೋಡು. ನಿನ್ನನ್ನು ಸಶರೀರನಾಗಿ ಸ್ವರ್ಗಕ್ಕೆ ಕಳುಹಿ ಸುತ್ತೇನೆ."

ಒಂದು ಅದ್ಭುತ ನಡೆಯಿತು! ಅಲ್ಲಿದ್ದವರು ನೋಡುತ್ತಿದ್ದ ಹಾಗೆಯೇ ತ್ರಿಶಂಕು ಸ್ವರ್ಗದ ಕಡೆ ಮೇಲೆ ಮೇಲೆ ಹೋದ. ಇಡೀ ವಿಶ್ವ ಕೌಶಿಕನ ತಪಶ್ಶಕ್ತಿಯನ್ನು ಆಶ್ಚರ್ಯದಿಂದ ನೋಡಿತು. ತ್ರಿಶಂಕು ಸ್ವರ್ಗದ ಬಾಗಿಲನ್ನು ತಲುಪಿದ. ಆದರೆ ದೇವಲೋಕದ ರಾಜ ಇಂದ್ರ, ತ್ರಿಶಂಕುವನ್ನು ಒಳಗೆ ಬಿಡಲಿಲ್ಲ. 'ನೀನೊಬ್ಬ ಚಂಡಾಲ, ನಿನಗೆ ಸ್ವರ್ಗದಲ್ಲಿ ಪ್ರವೇಶವಿಲ್ಲ' ಎಂದು ಹೇಳಿ ತ್ರಿಶಂಕುವನ್ನು ಕೆಳಗೆ ದಬ್ಬಿಬಿಟ್ಟ. ತ್ರಿಶಂಕು ತಲೆಕೆಳಗಾಗಿ ಬೀಳುತ್ತಾ "ತಪಸ್ವಿಗಳೇ ಕಾಪಾಡಿ! ಕಾಪಾಡಿ!" ಎಂದು ಕೂಗಿಕೊಂಡ.

ಕೌಶಿಕನಿಗೆ ಆ ಕೂಗು ಕೇಳಿಸಿತು, ಇಂದ್ರನ ಮೇಲೆ ಬಹಳ ಕೋಪ ಬಂತು. ಸಿಡಿಲಿನಂತೆ 'ನಿಲ್ಲು! ನಿಲ್ಲು!' ಎಂದು ಕೂಗಿದ ಮತ್ತೊಂದು ಅದ್ಭುತ ನಡೆಯಿತು!! ತ್ರಿಶಂಕು ಭೂಮಿಗೂ ಸ್ವರ್ಗಕ್ಕೂ ನಡುವೆ ತಲೆಕೆಳಗಾಗಿ ನಿಂತ. ಭೂಮಿಯಲ್ಲಿ ಮಹರ್ಷಿ ಗಳ ನಡುವೆ ಕೌಶಿಕ ಕೋಪದಿಂದ ನಡು ಗುತ್ತಿದ್ದ. "ಹೊಸ ಸ್ವರ್ಗವನ್ನು ಸೃಷ್ಟಿ ಸುತ್ತೇನೆ, ಬೇರೊಬ್ಬ ಇಂದ್ರನನ್ನು ಹುಟ್ಟಿ ಸುತ್ತೇನೆ" ಎಂದು ಅವನು ಸಂಕಲ್ಪಿಸಿದ;

ಈಗ ದೇವತೆಗಳಿಗೆ ಬಹಳ ಹೆದರಿಕೆ ಆಯಿತು. ಅವರೆಲ್ಲ ಇಂದ್ರನ ಜತೆಗೂಡಿ ಕೌಶಿಕನ ಬಳಿಗೆ ಬಂದರು. "ಕೌಶಿಕ ನಿನ್ನ ಕೋಪವನ್ನು ಬಿಡು. ನಿನ್ನ ಸೃಷ್ಟಿ ಅದ್ಭು ತವಾಗಿದೆ. ತ್ರಿಶಂಕು ಈಗ ಇರುವ ಕಡೆಯೇ ಇರಲಿ. ಅವನಿಗೆ ಸ್ವರ್ಗದ ಎಲ್ಲ ಸುಖವೂ ಸಿಗುತ್ತದೆ. ನೀನು ಸೃಷ್ಟಿಸಿರುವ ನಕ್ಷತ್ರ ಗಳೂ ಇರಲಿ. ಆದರೆ ಹೊಸ ದೇವತೆಗ ಳನ್ನೂ, ಇಂದ್ರನನ್ನೂ ಸೃಷ್ಟಿಸಬೇಡ" ಎಂದು ಪ್ರಾರ್ಥಿಸಿಕೊಂಡರು. ಕೌಶಿಕನು ಶಾಂತನಾದ. ದೇವತೆಗಳ ಪ್ರಾರ್ಥನೆಗೆ ಒಪ್ಪಿ ಕೊಂಡ. ತಾನು ಕೈಗೊಂಡಿದ್ದ ಸೃಷ್ಟಿ ಕಾರ್ಯವನ್ನು ನಿಲ್ಲಿಸಿದ.

ಇಷ್ಟು ಹೊತ್ತಿಗೆ ಅವನು ತಪಸ್ಸು ಮಾಡಿ ಸಂಪಾದಿಸಿದ್ದ ಶಕ್ತಿಯೆಲ್ಲ ಮುಗಿದು ಹೋಗಿತ್ತು. ಮತ್ತೆ ತಪಸ್ಸಿಗಾಗಿ ಹೊರಟ ಕಠಿಣವಾದ ತಪಸ್ಸನ್ನು ಆರಂಭಿಸಿದ.

ಕೌಶಿಕ ತಪಸ್ಸಿಗೆ ಆರಂಭಿಸಿದರೆ ದೇವ ತೆಗಳಿಗೆ ಹೆದರಿಕೆ. ತಮಗೆ ಮತ್ತೆ ತೊಂದರೆ ಯಾದೀತೆಂಬ ಭಯ ಅವರಿಗೆ. ಅದಕ್ಕಾಗಿ ಅವನ ತಪಸ್ಸು ನಿಲ್ಲಿಸುವಂತೆ ಮಾಡಬೇ ಕೆಂದು ಯೋಚಿಸಿದರು. ಮೇನಕೆ ಎಂಬ ಲೋಕದ ಅಪ್ಸರೆಯನ್ನು ಕೌಶಿಕ ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಕಳುಹಿಸಿದರು.

ಮೇನಕೆ ಕೌಶಿಕನ ಬಳಿಗೆ ಬಂದಳು. ಕೌಶಿಕನ ಅವಳನ್ನು ನೋಡಿದ. ಆಕೆ ಬಹಳ ಸುಂದರಳಾಗಿದ್ದಳು. ಅವಳನ್ನು ಪ್ರೀತಿಸಿದ. ಇಬ್ಬರೂ ಸಂಸಾರ ಮಾಡಲು ಆರಂಭಿಸಿ ದರು.

ಹಲವು ವರುಷಗಳ ನಂತರ ಮೇನಕೆಗೆ ಒಂದು ಹೆಣ್ಣುಮಗು ಹುಟ್ಟಿತು. ಆಕೆಯೇ ಶಕುಂತಲೆ. ಆಗ ಕೌಶಿಕನಿಗೆ "ನಾನು ಮಾಡಿದ್ದು ತಪ್ಪು. ಸಂಸಾರದಲ್ಲಿ ಮುಳುಗಿ ತಪಸ್ಸನ್ನೇ ಮರೆತೆನಲ್ಲಾ" ಎನಿಸಿತು. ಮೇನಕೆ ಶಕುಂತಲೆಯರನ್ನು ಬೇರೆ ಕಳು ಹಿಸಿ ಮತ್ತೆ ಘೋರವಾದ ತಪಸ್ಸನ್ನು ಆರಂಭಿಸಿದ.

ಸುಮಾರು ಒಂದು ಸಾವಿರ ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿದ. ಮೌನವ್ರತವನ್ನು ಹಿಡಿದ. ಆಹಾರ ನಿದ್ರೆ ಗಳನ್ನು ಬಿಟ್ಟ. ಮರದ ಕೊರಡಿನಂತೆ ನಿಶ್ಚಲನಾಗಿದ್ದ. ಕೊನೆ ಕೊನೆಗೆ ತಪಸ್ಸು ಬಹಳ ಘೋರವಾಯಿತು. ಅವನ ತಲೆ ಯಿಂದ ಹೊಗೆ ಹೊರಟಿತು. ಆ ಮಹಾ ಜ್ವಾಲೆಯಿಂದ ಇಡೀ ಲೋಕವೇ ತಲ್ಲಣ ಗೊಂಡಿತು.

ದೇವತೆಗಳೆಲ್ಲ ಬ್ರಹ್ಮನ ಬಳಿಗೆ ಹೋದರು, "ದೇವ, ಕೌಶಿಕನ ಇಚ್ಛೆಯನ್ನು ಈಡೇರಿಸ ಬೇಕು" ಎಂದರು. ಬ್ರಹ್ಮದೇವ ಕೌಶಿಕನ ಬಳಿ ಬಂದ. ಮಧುರವಾಗಿ "ಬ್ರಹ್ಮರ್ಷಿ" ಎಂದು ಕರೆದ. "ನಿನ್ನ ತಪಸ್ಸಿಗೆ ಮೆಚ್ಚಿ ದ್ದೇನೆ" ಎಂದ ಕೌಶಿಕನಿಗೆ ಸಂತೋಷವಾ ಯಿತು. ವಸಿಷ್ಠರ ಕೈಯಲ್ಲೂ ಬ್ರಹ್ಮರ್ಷಿ ಎನಿಸಿಕೊಳ್ಳಬೇಕೆಂದು ಅವನಿಗೆ ಆಸೆ. ಅದನ್ನು ಬ್ರಹ್ಮನ ಮುಂದೆ ಹೇಳಿದ. ಬ್ರಹ್ಮದೇವ ನಕ್ಕು ವಸಿಷ್ಠರನ್ನು ಕರೆ ಸಿದ. ವಸಿಷ್ಠರು ಸ್ನೇಹದಿಂದ "ಕೌಶಿಕ, ನೀನು ಬ್ರಹ್ಮರ್ಷಿಯಾದೆ" ಎಂದು ಹೇಳಿ ಅವನನ್ನು ಅಪ್ಪಿಕೊಂಡರು. ಅಂದಿನಿಂದ ಕೌಶಿಕ ವಿಶ್ವಾಮಿತ್ರನಾದ.






# ಸ್ವಾಗತಾರ್ಹ ನಾಟಕ

## ಸಾಹಿ ಮೋಹನ ವಿಠಲ ಪರಮ ಕರುಣಾಜಲಧೇ ......

ಲೇಖಕರು : ಸೀತಾರಾಮುದಾಸ,
ಪ್ರಕಾಶಕರು : ಶ್ರೀಮತಿ ಲಕ್ಷ್ಮೀಬಾಯಿ,
ನಂ. 338 (ಮಹಡಿ) ಆರನೇ ಮುಖ್ಯ ರಸ್ತೆ,
ನರಸಿಂಹರಾಜಾ ಕಾಲೋನಿ– ಬೆಂಗಳೂರು–19
ಪುಟಗಳು : 142, ಬೆಲೆ : ರೂ. 10–00

ಕನ್ನಡ ಸಾಹಿತ್ಯವನ್ನು ತಮ್ಮ ಭಕ್ತಿರಸ ಪದಗಳಿಂದ; ಹಾಡುಗಳಿಂದ ಸಮೃದ್ಧ ವಾಗಿಸಿದ ದಾಸಪಂಥದ ಶ್ರೇಷ್ಠರಲ್ಲಿ ಶ್ರೀ ವಿಜಯದಾಸರ ಹೆಸರು ಸ್ವರ್ಣಾಂಕಿತ. ಅವರು ಜನರಲ್ಲಿ ಭಕ್ತಿಯ ಪಿಯೂಷವನ್ನು ಹರಡಿ ಅನೇಕರ ಜೀವನೋದ್ಧಾರಕ್ಕೆ ಕಾರಣ ರಾದರು. ಅಂಥವರಲ್ಲಿ ಮೇಲಕ್ಕೆ ಧ್ರುವ ತಾರೆಯಂತೆ ಕಾಣುವ ಹರಿದಾಸರಾಗಿದ್ದ ಶ್ರೀ ಮೋಹನದಾಸರ ಚರಿತ್ರೆ ಇಲ್ಲಿ ಈ ನಾಟಕ ದಲ್ಲಿ ತುಂಬ ಹೃದಯಂಗಮವಾಗಿ ಚಿತ್ರಿತ ವಾಗಿದೆ.

ಲೇಖಕರು ತಿಳಿಸಿರುವಂತೆಯೇ ಶ್ರೀ ಮೋಹನದಾಸರೊಬ್ಬ ಐತಿಹಾಸಿಕ ಭಕ್ತಿಯುತ ವ್ಯಕ್ತಿ. ಅವರ ಅನೇಕ ಪದ್ಯ, ಪದ, ಸುಳಾದಿಗಳು, ಕೋಲುಹಾಡು ಇವೆಲ್ಲ ಕನ್ನಡಿಗರ ಮನೆ ಮನಗಳಲ್ಲಿ ನೆಲಸಿವೆ.

ತಂಗೆವ್ವನ ಏಕೈಕ ಪುತ್ರನಾಗಿದ್ದ ವರದಪ್ಪನನ್ನು ಅನಾಥತ್ವದಿಂದ ಮೇಲೆತ್ತಿ ದವರು ಶ್ರೀ ವಿಜಯದಾಸರು. ಈ ವರದಪ್ಪನೇ ಮುಂದೆ ಶ್ರೀ ಮೋಹನ ದಾಸರಾಗಿ ಮೆರೆದದ್ದು. ತೀರ ಹಸುಳೆ ಯಾಗಿದ್ದಾಗಲೇ ತಂದೆಯನ್ನು ಕಳೆದು ಕೊಂಡು ತೀರ ಅನಾಥನಾಗಿ, ಬಡವಿ ತಂಗೆವ್ವನ ಮುದ್ದಿನ ಮಗನಾದರೂ ಅಹನ್ಯಹನ್ಯಕ್ಕೆ ತುತ್ತಾದ ಈ ಬಾಲಕ ಶ್ರೀ ವಿಜಯದಾಸರ ಭಕ್ತಿಯ ನೆರಳಲ್ಲಿ ಬೆಳೆದ. ಸಂಸ್ಕಾರಕ್ಕೆ ತಕ್ಕಂತೆ ಗುಣಗಳು ಮೈಗೂಡಿ ಒಡಮೂಡುವುವು ಎಂಬುದಕ್ಕೆ ಶ್ರೀ ಮೋಹನದಾಸರ ಜೀವನವೇ ಉಜ್ವಲ ನಿದರ್ಶನ.

ತೀರ ಅನಾಥನಾಗಿದ್ದ ವರದಪ್ಪನನ್ನು ವಿಜಯದಾಸರು ತಮ್ಮ ಆಶ್ರಮದ ನೆರಳಿನಲ್ಲಿ ಬೆಳೆಸಿದರು. ಉಪನಯನಾದಿ ಸಂಸ್ಕಾರ ಗಳಾದ ಅನಂತರ ಗೃಹಸ್ಥ ಜೀವನಕ್ಕೆ ಕಾಲಿಟ್ಟ ವರದಪ್ಪನನ್ನು ಯೋಗ್ಯಕಾಲದಲ್ಲಿ ಎಚ್ಚರಿಸಿ ದಾಸಶ್ರೇಷ್ಠನನ್ನಾಗಿ ಮಾಡಿದರು. ವರದಪ್ಪ ಮೋಹನದಾಸನಾದ. ಅನೇಕ ಸುಳಾದಿ ಪದ ಪದ್ಯಗಳನ್ನು ರಚಿಸಿ ಕೃತ ಕೃತ್ಯರಾದರು. ಅವುಗಳಲ್ಲಿ ಮೋಹನ ರಾಗದ ಈ ಹಾಡಂತೂ ತುಂಬ ಪ್ರಸಿದ್ಧ ವಾದದ್ದು :

"ವಿಜಯರಾಯರ ಪಾದ ಭಜಿಸಿದವ–
ಗನವರತ
ವಿಜಯವಾಗುವುದಕ್ಕೆ ಸಂದೇಹವ್ಯಾಕೆ
|| ಪ ||
ಗಜರಾಜ ವರದನಿಗೆ ನಿಜದಾಸನೆಂದೆನಿಸಿ
ದ್ವಿಜಕುಲದಿ ಮೆರೆದವರೋ–ಇವರೋ
|| ಅ ||
ಮೊದಲು ಋಷಿಗಳು ಕಲೆತು
ಸಪ್ರಯಾಗವ–ನಾಕ
ನದಿಯ ತೀರದಿ ರಚಿಸಲು
ಸದುಮ ಸಂಭವನಂಕಥನ ಬಂದು
ಮುನಿವೃಂದ
ಹೃದಯಕ್ಕೆ ಸಂಶಯ ಹಿಡಿಸಲು
ವಿಧಿ ವಿಷ್ಣು ಶಿವರೊಳಗೆ ಉತ್ತಮರ
ತಿಳಿಯದೆ
ಮುದಡ ಭಾವವ ವಹಿಸಲು
ಒದಗಿ ಭೃಗು ಮುನಿ ಬಂದು–ಸರ್ವೇಶ–
ವೈಕುಂಠ
ಸದನನೆಂದರುಹಿದರೋ–ಇವರೋ"

ಹೀಗೆ ಮೋಹನದಾಸರು ತಮ್ಮ ಗುರು ಗಳನ್ನು ಹೊಗಳಿದ್ದಾರೆ. ಜತೆಗೆ ತಿರುಪತಿ ತಿಮ್ಮಪ್ಪನನ್ನು ಭಜಿಸಿದ್ದಾರೆ.

ಈ ನಾಟಕದ್ದು ಒಟ್ಟು ಏಳು ಅಂಕ ಗಳಿದ್ದು ಪ್ರತಿಯೊಂದು ಅಂಕವೂ ಹಿತ ಮಿತ ಪ್ರಮಾಣದ ದೃಶ್ಯಗಳನ್ನು ಒಳಗೊಂಡಿದೆ. ಹನ್ನೆರಡು ಪಾತ್ರಗಳು ವಿಹಿತವಾಗಿ ಬಂದಿದ್ದು ಯಾವ ಒಂದು ಪಾತ್ರವೂ ಅನಾವಶ್ಯಕವಾಗಿ ಬಂದಿಲ್ಲ. ಲೇಖಕರು ಓದುಗರಿಗೆ ಹಾಗೂ ದರ್ಶಕರಿಗೆ ಬೇಸರ ಬರವಂತೆ ಎಚ್ಚರವಹಿಸಿ ಪಾತ್ರೋಚಿತ ಭಾಷಾಪ್ರಯೋಗ ಮಾಡಿ ಕೃತಿಯ ಔಪಯೋಗಿಕತೆಯನ್ನು ಹೆಚ್ಚಿಸಿದ್ದಾರೆ.

ಸಿನಿಮಾ ತಂತ್ರದ ನಾಟಕಗಳೇ ಹೆಚ್ಚು ಹೆಚ್ಚಾಗಿ ಬರುತ್ತಿರುವ ಈ ದಿನಗಳಲ್ಲಿ ಇಂಥ ದೊಂದು ನಾಟಕ ಸ್ವಾಗತಾರ್ಹ.

– ಕುಮುದಪ್ರಿಯ



# ಗೃಹಲಕ್ಷ್ಮಿ



# ಕುಮಾರವ್ಯಾಸ ಚಿತ್ರಿಸಿದ ದ್ರೌಪದಿ

ಭಾರತದಲ್ಲಿ ಎಲ್ಲರಿಗಿಂತಲೂ ಹೆಚ್ಚು ನೊಂದ ವ್ಯಕ್ತಿ ಎಂದರೆ ದ್ರುಪದನಂದನೆ. ಅಗ್ನಿಪುತ್ರಿಯೇನೋ ವಾಯುಪುತ್ರನಿಗೆ ಸರಿಯಾದ ಪತ್ನಿ. ಆದರೆ ಇನ್ನಾವ ನಾರಿಗೂ ಬಾರದ ಅಸಾಧ್ಯ ಕಷ್ಟ, ಕೋಟಲೆಗಳ ಅಸಹ್ಯ ಹೊರೆಯಿಂದ ನಲುಗಿ ಮೆತ್ತಗಾಗಿ, ಅವಳು ಶರಣಜನಸುರಧೇನುವಿನ ಎಳಗರುವಾಗಿ ಬಿಟ್ಟಿದ್ದಾಳೆ.

ಮಹಾಭಾರತದಲ್ಲಿ ಯಾರಾದರೂ ಗಂಡಸಿದ್ದರೆ ಅದು ದ್ರೌಪದಿ, ಎಂಬ ಒಂದು ಮಾತನ್ನು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ವಚನಭಾರತದ ಪೀಠಿಕೆಯಲ್ಲಿ ಹೇಳಿದ್ದಾರೆ. ದ್ರೌಪದಿಯಂತಹ ಗಂಡು ಪಾತ್ರವನ್ನು ನಿರ್ಮಿಸಿದ ಕುಮಾರವ್ಯಾಸನೂ ಗಂಡು ಕವಿ. ಬಹುಶೀಕ ವ್ಯಾಸನನ್ನೇ ಅನುಸರಿಸಿದ್ದರೂ ಕನ್ನಡದಲ್ಲಿ ಕುಮಾರವ್ಯಾಸನ ಭಾರತವು ಕೆಚ್ಚಿನ ಕಾವ್ಯ.

ರಾಜ್ಯವನ್ನು ಕಳೆದುಕೊಂಡು ಅಪಮಾನಕ್ಕೆ ಗುರಿಯಾಗಿ ವನವಾಸ, ಅಜ್ಞಾತವಾಸಗಳನ್ನು ಅನುಭವಿಸಿದ ಮೇಲೆಯೂ ಧರ್ಮಜನಿಗೂ ಅವನ ನಾಲ್ವರು ತಮ್ಮಂದಿರಿಗೂ ಕೇಡಿಗರಾದ ಕೌರವರೊಡನೆ ಸಂಧಿಯೇ ಸಮ್ಮತವೆನಿಸಿತು. ಆದರೆ ದ್ರೌಪದಿಗೆ ಮಾತ್ರ ಅದು ಬೇಡವಾಗಿತ್ತು. ಪಾಂಡವರು ಬಿಡಲಿ, ತಾನೊಬ್ಬಳೇ ಯುದ್ಧವನ್ನೆಸಗುವುದಾಗಿ ಕಿಡಿನುಡಿಯುತ್ತಾಳೆ. ಸಹದೇವ, ಘಟೋತ್ಕಚ, ಸುಭದ್ರಾತನಯ, ತನ್ನ ಐವರು ತನಯರೂ ಮತ್ತು ತನ್ನ ತಂದೆಯ ಮೂರಕ್ಷೋಹಿಣಿ ಸೇನೆ ಇನಿಬರೆ ಕಾದುವರು. ದುಃಶಾಸನನ ರಕುತುವ ಕುಡಿದು ಕುರುಕುಲವನವ ಸುಡುವರು—ಎಂದು ಪರಮ ವೈರಿಗಳಂತಿರುವ ಪತಿಗಳ ಮುಂದೆ ಹಂಗಿಸಿ ನುಡಿಯುತ್ತಾಳೆ. ಕೃಷ್ಣ ಮುಂದೆ ಕಂಬನಿದುಂಬಿ ನಿಲ್ಲುತ್ತಾಳೆ. ಆಗ ಶ್ರೀಕೃಷ್ಣನು "ಕಾಳಗವನೆ ಒಲಿದು ಬಹೆನು" ಎಂದು ತಂಗಿಯನ್ನು ಸ್ವಾಂತನ ಪಡಿಸುತ್ತಾನೆ. "ಏಳಿಲವ ಮಾಡಿದೊಡೆ ರಿಪುಗಳ ಸೀಳ ಕರುಳನು ಮುಡಿಸದಿಹೆನೆ ನಿನ್ನ ಕಬರಿಯಲಿ" ಎಂದು ಅಭಯವಚನದ ಮಾತನ್ನಾಡುತ್ತಾನೆ.

ದೇವಕಿಯ ಮೇಲಾಣೆ ವರವಸು
ದೇವನಂಘ್ರಿಗಳಾಣೆ............
...... ...................
ನಾವು ಸಂಧಿಯ ನೆನದಲವದಿರ
ಭಾವವನು ಕಲಿಮಾಡಿ ಕೋಪವ
ಶೀವಿ ಸಂಧಿಯ ಮುರಿದು ಬಹೆವಿದ ನಂಬು
ನೀನೆಂದ ॥

ಈಗ ಮಾತ್ರ ಛಲಗಾತಿಯಾದ ದ್ರೌಪದಿಗೆ ಸ್ವಲ್ಪ ಸಮಾಧಾನವೆನಿಸಿರಬೇಕು. ದ್ರೌಪದಿಯ ರೋಷಕ್ಕೆ ಕಾರಣವಿದೆ. "ಮುಂದಲೆಯ ಹಿಡಿದೆಳೆದು ಸಭೆಯಲಿ ತಂದು ಸೀರೆಯ ಸುಲಿದಡೆ" ಆ ದುಃಶಾಸನ ದುರ್ಯೋಧನರ ಮುಂದೆ "ಮೌನದೊಳಿದ್ದರಲ್ಲದೆ ಪತಿಗಳುಸುರಿದರೆ?" ದ್ರೌಪದಿ ಇಷ್ಟೊಂದು ಹೋರಾಡುವುದು ಯಾತಕ್ಕಾಗಿ? ತನ್ನ ಶೀಲಕ್ಕಾಗಿ, ತನ್ನ ಚಾರಿತ್ರ್ಯಕ್ಕಾಗಿ, ತನ್ನ ಅವಮಾನದ ಸೇಡಿಗಾಗಿ, ಅಣ್ಣನ ಕೈಗಳನ್ನು ಸುಡಲು ಹೊರಟ ಭೀಮ ಈಗ ಮತ್ತೆ ತಂಪಾಗಿ ಸಂಧಿಯೇ ಸಾಕೆಂದು ತೆಪ್ಪಗಾಗಿದ್ದಾನೆ. ಶಶಿಕುಲವನ್ನು ನರಕದಲ್ಲಿ ಇಳಿಸಲು ಸಿದ್ಧನಾಗಿದ್ದಾನೆ. ಇಂತಹ ಸನ್ನಿವೇಶದಲ್ಲಿ ದ್ರೌಪದಿಯ ರೋಷ ಹೆಡೆಯತ್ತದೆ ಏನು ಮಾಡೀತು? ಅಣ್ಣ ಶ್ರೀಕೃಷ್ಣನಿಂದ ಕೌರವ ಸಂಹಾರಕ್ಕೆ ಅಭಿವಚನ ದೊರೆತಾಗ ದ್ರೌಪದಿ ಸಮಾಧಾನದ ನಿಟ್ಟುಸಿರೆಳೆದಳು.

ಕೌರವರಿಂದ ಆದ ಅನ್ಯಾಯಗಳಿಂದ ವಾಯುಪುತ್ರ ಭೀಮನು ಬಿರುಗಾಳಿಯೇ ಆಗಿರುತ್ತಾನೆ. ಇವನ ಜೊತೆಗೆ ಅಗ್ನಿಪುತ್ರಿ ಸೇರಿದ ಮೇಲೆ ಕೌರವರು ಅವಳನ್ನು ಕೆಣಕಿದ ಮೇಲೆ ಸಾಕ್ಷಾತ್ ಸಿಡಿಲೇ ಆಗುತ್ತಾಳೆ. ಮಹಾಭಾರತವೆಂಬ ಮಹಾವೃಕ್ಷಕ್ಕೆ ಆದಿಪರ್ವವೇ ಕೃಷಿಮಾಡಿದ ಭೂಮಿ, ರಾಜಸೂಯ ಯಾಗವೇ ಬೀಜ, ದುರ್ಯೋಧನನ ಮಾನಭಂಗದ ದ್ರೌಪದಿಯ ಅಪಹಾಸ್ಯದ ನಗೆಯೇ ಮೊಳಕೆ, ನೋಸದ ಪಗಡೆಯಾಟದ ವಿನೋದವೇ ಚಿಗುರು, ದ್ರೌಪದಿಯ ಶ್ರೀಮುಡಿಯನ್ನು ಹಿಡಿದು ಎಳೆದದ್ದೇ ಹೂವು, ಹೀಗೆ ಹೆಮ್ಮರವಾಗಿ ಬೆಳೆದು ಕಡೆಗೆ ಕೌರವನ ಊರುಭಂಗ, ಮುಕುಟಭಂಗ ನಂತರ ಕೌರವರ ಸರ್ವನಾಶದ ಫಲಗಳನ್ನು ನೀಡುತ್ತದೆ.



ದ್ರೌಪದಿಯಲ್ಲಿ ಸಾತ್ವಿಕತೆ, ರಾಜಸ ಹಾಗೂ ರಸಿಕತೆಯೂ ಇದೆ. ಆಕೆ ಛಲಗಾತಿಯಾಗಿರುವಂತೆ ಚೇಷ್ಟೆಯ ಪ್ರವೃತ್ತಿಯವಳೂ ಇದ್ದಾಳೆ. ಕಲಿಭೀಮನೊಡನೆಯೇ ನಡೆಯಬೇಕು. ಅವಳ ರಸಿಕ ಚೇಷ್ಟೆ. ಭೀಮನು ಗಂಡರ ಗಂಡನೆಂಬ ಅಭಿಮಾನ ಅವಳಿಗೆ. ವನವಾಸದ ಕಷ್ಟದಲ್ಲಿಯೂ ಆ ವೀರ ಇನಿಯನಿಂದ ಸೌಗಂಧಿಕಾ ಪುಷ್ಪವನ್ನು ಪಡೆಯಬೇಕೆಂಬ ಆಸೆ ಅವಳಿಗೆ. ಎಷ್ಟು ರಸಿಕಳೋ ಅಷ್ಟೇ ಚತುರೆಯೂ ಹೌದು ದ್ರೌಪದಿ. ಕೀಚಕನ ಸಂಹಾರದ ಕಾಲಕ್ಕೆ ಭೀಮನು ಹೆಣ್ಣುಡಿಗೆಯಲ್ಲಿ ನಾಟ್ಯ ನಿಲಯಕ್ಕೆ ನಡೆದಿರುವಾಗ ದ್ರೌಪದಿಗೆ ಹಿಗ್ಗು, ನಗೆ ಎರಡೂ ಖಳನ ಮುರಿದು ಬಾ ಎಂದು ಸೆಣಸಿದಳೆದಳು. ಆತನ ಹೊಸ ಪರಿಯ ಹಿಣಿಲಗೆಲಿವಳು ದ್ರೌಪದಿಯ ಚೆಲ್ವಿಕೆಯನ್ನು ಕುಮಾರವ್ಯಾಸರು ಮಾರ್ಮಿಕವಾಗಿ ವರ್ಣಿಸಿದ್ದಾನೆ.

ಆಕೆ ಮಾತಿನಲ್ಲಿ ಚದುರೆಯೂ ಹೌದು, ಪ್ರಾತಿಕಾಮಿ ಬಂದು ಯುಧಿಷ್ಠಿರ ನೃಪತಿ ಅನುಜರೊಡನೆ ರಾಣಿಯನ್ನು ಸೋತನು ಎಂದರುಹಿದಾಗ ದ್ರೌಪದಿ ದ್ಯೂತದ ಪ್ರಸಂಗವನ್ನು ಸಾದ್ಯಂತವಾಗ ತಿಳಿದುಕೊಳ್ಳುತ್ತಾಳೆ ಧರ್ಮರಾಯನು

ಶ್ರೀಮತಿ ಎ. ಎಸ್. ಪಂಕಜ
ಎಂ ಎ, ಬಿ.ಇಡಿ.

ಸಕಲೈಶ್ವರ್ಯವನ್ನೂ, ಸೇನೆಯನ್ನು, ಸೋದರರನ್ನೂ, ತನ್ನನ್ನೂ ಸೋತ ಬಳಿಕ ರಾಣಿಯನ್ನೂ ಒಡ್ಡಿದನೆಂದು ಹೇಳಿದಾಗ ದ್ರೌಪದಿ ಅದೇ ಮಾತಿನ ಎಳೆ ಹಿಡಿದು ಹೇಳುತ್ತಾಳೆ. "ಮುನ್ನ ತನ್ನನ್ನು ಸೋತ ಬಳಿಕದೊಳು ಎನ್ನನು ಸೋತರೆ ಸಲುವುದೆ? ಸಂಪನ್ನ ವಿಮಲ ಜ್ಞಾನರು ಅರಿದು ಈ ಪ್ರಶ್ನೆಗೆ ಉತ್ತರ ಕೊಡಲಿ" ಎಂದು ವಾದ ಮಾಡುತ್ತಾಳೆ. ಇಂತಹ ಸೂಕ್ಷ್ಮಮತಿ ದ್ರೌಪದಿ. ಧರ್ಮರಾಯನು ತನ್ನನ್ನೇ ತಾನು ಸೋತ ಬಳಿಕ ಪತ್ನಿಯನ್ನು ಪಣಕ್ಕೆ ಹಚ್ಚಲು ಅವನಿಗೆ ಸ್ವಾತಂತ್ರ್ಯವೆಲ್ಲಿ!

ದ್ರೌಪದಿಗೆ ದುಃಶಾಸನನ ರಕುತದಿಂದ ತನ್ನ ಮುಡಿಯನ್ನು ಭೀಮ ರಚಿಸುವವರೆಗೆ ಸಮಾಧಾನವಿಲ್ಲ. ಭೀಮನು ತಪ್ಪಿದರೆ ದುಃಶಾಸನನ ಕರುಳನ್ನು ತಂಗಿಯ ಮುಡಿಗೆ ತಾನು ಮುಡಿಸುವೆನೆಂದು ಶ್ರೀಕೃಷ್ಣನ ತಂಗಿಗೆ ವಚನ ನೀಡಿ ಸಂತೈಸುತ್ತಾನೆ. ಕೊನೆಗೆ ಭೀಮನೇ ದುಃಶಾಸನನ ವಧೆಗೈದು ದ್ರೌಪದಿಯ ಮುಡಿಯನ್ನು ಕಟ್ಟಿ ಖಳನ ದಂತಶ್ರೇಣಿಯಿಂದ ಅವಳ ಹೇಳಲನ್ನು ಬಾಚಿದಾಗ ದ್ರೌಪದಿ ಉತ್ಸಾಹದಿಂದ,

> ಸಾರಿದಳು ಸರಸಿಜವದನೆ ಭ
> ರ್ತಾರನನು ನಸುನಗುತ ಚರಣದ
> ಚಾರು ನೇವುರವುಲಿಯಲೊದೆದಳು
> ಖಳನ ಮಸ್ತಕವ

ಇಂತಹ ವೀರಸತಿ ದ್ರೌಪದಿ ವೀರಸತಿಯಾದಂತೆಯೇ ಶ್ರೀಕೃಷ್ಣನ ಪರಮ ಭಕ್ತೆಯೂ ಹೌದು. ಕೃಷ್ಣನ ತಂಗಿಯಾದ ಈ ಕೃಷ್ಣೆ ಆತ ಪರಮಾತ್ಮನೆಂಬುದನ್ನು ಅಡಿಗಡಿಗೂ ಬಲ್ಲಳು. ಶ್ರೀಕೃಷ್ಣನು ಮಾನವರೂಢಿಯಾಗಿ ಅಣ್ಣನ ನಾಟಕ ಆಡುವಾಗಷ್ಟೆ ಈಕೆ ಆತನ ತಂಗಿ, ಉಳಿದ ಸಮಯಕ್ಕೆ ಆತ ಭಗವಂತ, ಈಕೆ ಭಕ್ತೆ.

ಮಹಾಸತಿ ದ್ರೌಪದಿಗೆ ಎಡರಿನಲ್ಲಿ ಶರಣುಹೋಗಲು ಇದ್ದುದು ಎರಡೇ ಎಡೆ. ಕೃಷ್ಣನ ಚರಣ, ಭೀಮನ ವಕ್ಷಸ್ಥಳ. ದುಃಶಾಸನನು ದ್ರೌಪದಿಯ ಸೆರಗನ್ನು ಹಿಡಿಯಲು ಅವಳು ಕಂಬನಿಗರೆಯುತ್ತಾ ಪತಿಗಳ ಕಡೆನೋಡಿ ಅನಂತರ ಭೀಷ್ಮ ಮುಂತಾದ ಎಲ್ಲರನ್ನೂ ಕುರಿತು ಮೊರೆಯಿಟ್ಟಳು. ಕೊನೆಗೆ ಅಸಹಾಯಳಾದ ದ್ರೌಪದಿ ಪರಿಪರಿಯಿಂದ ಪರಮಾತ್ಮನ ಧ್ಯಾನ ಮಾಡುತ್ತಾಳೆ. "ಸುಲಿವರೂ ಳೊಳಗುಟ್ಟ ಸೀರೆಯನು ಎಲೆ ಮುರಾಂತಕ ರಕ್ಷಿಸೈ" ಎಂದು ಮೊರೆಯಿಟ್ಟು, ಸೆರೆಗೊಡ್ಡಿ ಬೇಡಿಕೊಳ್ಳುತ್ತಾಳೆ. ಖಳನ ಕೈಗೆ ಸಿಕ್ಕ ಸೆರಗನ್ನು ಒಡ್ಡಿ ಬೇಡುವ ಶರಣಾಗತಿಗೆ ಪ್ರಥಮದಲ್ಲಿ ಕೃಷ್ಣನು ಚಲಿಸುವುದಿಲ್ಲ. ತನ್ನ ಸೀರೆಯನ್ನು ದುಃಶಾಸನನು ಸೆಳೆಯುತ್ತಿರುವುದಿಲ್ಲ, ಸುಲಿಯುತ್ತಿರುತ್ತಾನೆ ಎಂದು ದ್ರೌಪದಿ ನುಡಿಯುವಲ್ಲಿ ಎಂತಹ ವೇದನೆ! ತನ್ನ ಚರ್ಮವನ್ನೆ ಸುಲಿದಷ್ಟು ವ್ಯಥೆ ಅಡಗಿದೆ ಈ ಸೆಳೆತದಲ್ಲಿ. ಇಲ್ಲಿ ಕೃಷ್ಣನು ಅಣ್ಣನಾಗಿ ದ್ರೌಪದಿಯ ಅಳಲನ್ನು ಶೀಘ್ರದಲ್ಲಿ ಪರಿಹರಿಸದೆ ಭಗವಂತನಾಗಿ ಒಬ್ಬ ಭಕ್ತೆಯ ಉತ್ಕಟತೆಯನ್ನು ಪರೀಕ್ಷಿಸುತ್ತಾನೆ. ದ್ರೌಪದಿಗೆ ಅಹಂಕಾರವಿನ್ನೂ ಪೂರ್ತಿ ಮುಗಿದಿಲ್ಲ. ತನ್ನ ಮಾನರಕ್ಷಣೆಯನ್ನು ತಾನೇ ಮಾಡಿಕೊಳ್ಳುವ

ಅಹಂಕಾರ ಆಕೆಗೆ. ಇದರ ಪ್ರತ್ಯಯ ಮಾಡಿದಾಗ ಮಾತ್ರ ಆಕೆ,

ಏಕ ಹಸ್ತದಲಂಬರವ ಹಿಡಿ
ದೇಕ ಹಸ್ತವ ನೆಗಹಿ ಮೊರೆಯಿಡೆ
ಲೋಕನಾಥ ಮುಕುಂದ ತಾನದ
ಕೇಳದಂತಿರಲು
ಆಕೆ ಮನದೊಳಗರಿದು ತನಗಿ
ನ್ನೇಕೆ ಮನದಭಿಮಾನವೆನುತಲಿ
ಲೋಕಸುಂದರಿ ಕರವೆರಡ ಮುಗಿದೆತ್ತಿಯೊರ
ಲಿದಳು

ತನ್ನ ಮೊರೆಯನ್ನು ಮುಕುಂದನು ಕೇಳದಂತಿರಲು ಇನ್ನೇಕೆ ಮಾನದಭಿಮಾನವೆನ್ನುತ್ತ ಎರಡು ಕರಗಳನ್ನು ಮೇಲಕ್ಕೆತ್ತಿ ಆರ್ತತೆಯಿಂದ ಒರಲಿದಾಗ, ದ್ವಾರಕೆಯಲ್ಲಿ ಸತ್ಯಭಾಮೆಯೊಡನೆ ಲೆತ್ತವನ್ನಾಡುತ್ತಿದ್ದ ಶ್ರೀ ಕೃಷ್ಣನು ನಾರಿಯ ಸೀರೆ ಅಕ್ಷಯವಾಗಲಿ ಎಂದು ಆದೇಶ ನೀಡುತ್ತಾನೆ. ಈಗ ತಂಗಿ ದ್ರೌಪದಿಯ ಭಕ್ತಿ ಭಗವಂತನ ಒರೆಗೆ ನಿಂತಿತು.

ತನಗೆ ಸಂಕಟ ಬಂದಾಗಲೆಲ್ಲ ದ್ರೌಪದಿ ಮೊರೆಯಿಡುವುದು ಮುರಾರಿಯಲ್ಲಿಯೇ. ಅವಳಿಗೂ ಗೊತ್ತು, 'ಮರೆದನಭ್ಯುದಯದಲಿ ನೀನೆಂದರಿವೆನಾಪತ್ತಿನಲಿ' ಎಂದು. ಇದು ಮನುಷ್ಯಮಾತ್ರರ ಚಿತ್ತಚಾಂಚಲ್ಯ. ಈ ಚಾಂಚಲ್ಯವನ್ನು ತೆರೆದ ಮನಸ್ಸಿನಿಂದ ಕೃಷ್ಣನ ಮುಂದೆ ಒಪ್ಪಿಕೊಳ್ಳುತ್ತಾಳೆ.

ದೂರ್ವಾಸಾತಿಥ್ಯದಲ್ಲಿ ತನ್ನ ಮರ್ಯಾದೆಯನ್ನು ಉಳಿಸುವವನು ಶ್ರೀಕೃಷ್ಣನಲ್ಲದೆ ಯಾರೂ ಇಲ್ಲ ಎಂಬ ಅನನ್ಯ ಭಕ್ತಿಯನ್ನು ಮೆರೆಯುತ್ತಾಳೆ. ತನ್ನ ಪ್ರಾರ್ಥನೆಗೆ ಪ್ರತ್ಯಕ್ಷನಾದ ಪರಮಾತ್ಮನನ್ನು ಹೀಗೆ ಕೊಂಡಾಡುತ್ತಾಳೆ.

ಧರಣಿಯನು ಬಿಡದಳೆದು ಹೆಚ್ಚಿದ
ಚರಣವಿದು ಸುರನದಿಯ ಸೃಜಿಸಿದ
ಚರಣವಿದು ಕಲ್ಲಾದಹಲ್ಯಾಶಾಪನಿರುಹರಣ
ಚರಣವಿದು ಕಾಳಿಂಗ ಮರ್ದನ
ಚರಣವಿದು ಶಕಟ ಪ್ರಭಂಜನ
ಚರಣವಿದೆಲಾಯೆನುತ ಕೊಂಡಾಡಿದಳು
ಹರಿಪದವ

ಎಂದು ಭಕ್ತಿ ಪುರಸ್ಸರವಾಗಿ ಶ್ರೀಕೃಷ್ಣನಡಿದಾವರೆಗಳಲ್ಲಿ ತನ್ನ ದೇಹವನ್ನು ಈಡಾಡುತ್ತಾಳೆ ಇಲ್ಲಿ ವಾಸ್ತವವಾಗಿ ಕುಮಾರವ್ಯಾಸನು ಶ್ರೀಕೃಷ್ಣನಡಿದಾವರೆಗಳಲ್ಲಿ ತನ್ನ ದೇಹವನ್ನು ಈಡಾಡುತ್ತಾನೆಂದು ಹೇಳಬಹುದು – ಏಕೆಂದರೆ ಕೃಷ್ಣ ನಂಣ್ಯವೆಂದರೆ ಕುಮಾರವ್ಯಾಸನಿಗೆ ಕಡು ಲೋಭಿಯ ಕಟ್ಟಾಸೆ. ಆದ್ದರಿಂದ ಎಳೆಯಷ್ಟು ಅವಕಾಶ ಸಿಕ್ಕಿದರೂ ಸಾಕು ಕೃಷ್ಣನ ಬಗ್ಗೆ ತನ್ನ ಭಕ್ತಿಯ ಹೊನಲನ್ನೇ ಹರಿಸಿ ಬಿಡುತ್ತಾನೆ.

ದುಃಖದ ಚೊಚ್ಚಲು ಮಗಳಾದ ದ್ರೌಪದಿಗೆ ಬರುವ ಸಂಕಟಗಳಾಗಿ ಒಂದೇ, ಎರಡೇ! ವಿರಾಟಪರ್ವದ ಕೀಚಕ ಪ್ರಸಂಗದಲ್ಲಿಯೂ ಮತ್ತೆ ಅದೇ ಸಂಕಟ 'ವಸ್ತ್ರಾಕರುಷಣದಭಯ ಮತ್ತೆ ಬಂದಿದೆ ದೇವಾ' ಎಂದು ಹಲುಬುತ್ತಾಳೆ.

ಹರಿ ಹರಿ ಶ್ರೀಕಾಂತ ದಾನವ
ಹರ ಮುರಾರಿ ಮುಕುಂದ ಗತಿಶೂ
ನ್ಯರಿಗೆ ನೀನೇ ಗತಿಯೆಲೈ ಗರುವಾಯಿಗೆಟ್ಟೆನೆಲೈ
ಕುರು ಕುಲಾಗ್ರಣಿ ಸೆಳೆದ ವಸ್ತ್ರಾ
ಕರುಷಣದ ಭಯ ಮತ್ತೆ ಬಂದಿದೆ
ಕರುಣಿ ನೀನೇ ಬಲ್ಲೆಯೆನುತಡಿಯಿಟ್ಟಳಂಬು
ಜಾಕ್ಷಿ

ಒಂದೇ ಒಂದು ಕೀಚಕ ಪ್ರಸಂಗವು ದ್ರೌಪದಿಯ–ಈ ಸಂದರ್ಭದಲ್ಲಿ ಸೈರಂಧ್ರಿಯ–ಕ್ಷಾತ್ರ, ಹೃದಯದ ಕುದಿ, ಭಕ್ತಿ, ಕರುಣೆ, ಕನಿಕರ ಎಲ್ಲವನ್ನೂ ಚಿತ್ರಿಸುತ್ತದೆ.

ಭಾರತದಲ್ಲಿ ಹೆಚ್ಚು ನೊಂದ ವ್ಯಕ್ತಿ ದ್ರುಪದನಂದನೆ. ವಿರಾಟನಗರಿಯಲ್ಲಿ ಅವಳ ಪಾಡೊಂದು ಪಾಡೆ! ಕೀಚಕ ಹೆಬ್ಬುಲಿಯ ಗರ್ಜನೆ; ಅಪಮಾನ ಮೊಸಳೆಯ ಹಗೇವು ಗಂಟಲು; ಸುದೇಷ್ಣೆ ಕಬ್ಬೆಕ್ಕಿನ ಚಿನ್ನಾಟ, ಪತಿ ಗಂಧರ್ವರ ಕಾತ್ಸಾರದ ಕಗ್ಗಾಡು, ಅಜ್ಞಾತವಾಸವಾದುದರಿಂದ "ಕಾಮಿನಿಗೆ ಕರಗುವ ಕೃಷ್ಣ", ಅವಳ ಬಳಿಗೆ ಬಂದು ಕಾಪಾಡಲಾರ; ದಿಕ್ಕು ತೋಚದ ಅಬಲೆಗೆ ಅವಳೆರಡನೆಯ ದೈವ ಭೀಮಸೇನನಲ್ಲದೆ ಮತ್ತಾವ ಗತಿ! 'ಕೀಚಕನ ಆಲಯದಲ್ಲಿಯ ಉತ್ತಮಮಧುವನ್ನು ಘಟಿಕೆಯಲಿ ತಾ' ಎಂದು ಸುದೇಷ್ಣೆ ಬೆಸಸಿದಾಗ ದ್ರೌಪದಿ ಇದೇನೊ ಅನಿಷ್ಟಸೂಚಕವೆಂದು ಮನದಲ್ಲಿ ನಿಶ್ಚಯಿಸುತ್ತಾಳೆ. ಆಗ ಶ್ರೀ ಕೃಷ್ಣನನ್ನು ಪ್ರಾರ್ಥಿಸಿ ಕೀಚಕನ ಆಲಯವನ್ನು ಪ್ರವೇಶಿಸುತ್ತಾಳೆ. ಕೀಚಕನು ಈಕೆಯನ್ನು ತುಡುಕಿದಾಗ ಸೂರ್ಯನಿಂದ ಬಂದ ದಾನವನು ಕೀಚಕನ್ನು ಹೊಯ್ದು ಸೈರಂಧ್ರಿಯನ್ನು ರಕ್ಷಿಸುತ್ತಾನೆ. ಆದರೆ ಎಲ್ಲಿಯವರೆಗೆ ಕೀಚಕನು ಸಪ್ರಾಣಿಸುವನೋ ಅಲ್ಲಿಯವರೆಗೆ ತನಗೆ ಸುರಕ್ಷತೆಯಿಲ್ಲ ಎಂದು ಮನಗಂಡು ದುಃಖ ಪಡುತ್ತಾಳೆ. 'ಕೊಂದು ಕೊಂಬೆನೆ ಆತ್ಮ ಘಾತವು', ಬೆಳಗಾದರೆ ಪಾತಕಿ ಕೀಚಕನ ಉಪದ್ರವ ಯಾರಿಗೆ ಹೇಳಿಕೊಳ್ಳಲಿ, ಯಾರ ಹತ್ತಿರಕ್ಕೆ ಹೋಗಲಿ, ಆರನ್ನು ಬೇಡಲಿ, ಅಕಟ ಹೆಂಗಸು ಜನ್ಮವನ್ನು ಸುಡಬೇಕು ನನ್ನಂತೆ ನವೆದ ಘೋರಪಾತಕಿ ಮತ್ತಾರಿದ್ದಾರೆ? ತಾನಾಗಿಯೇ ಸಾವು ಬರುವುದಿಲ್ಲ – ಎಂದು ಬಸುರನ್ನು ಹೊಯ್ದುಕೊಳ್ಳುತ್ತಾಳೆ. ಬಳಿಕ ಮನಸ್ಸಿನಲ್ಲೆ ಯೋಚಿಸಿ 'ಎಲ್ಲರೊಳು ಕಲಿಭೀಮನೆ ಮಿಡುಕುಳ್ಳ ಗಂಡನು ಹಾನಿ ಹರಿಬಕ್ಕೆ ನಿಲ್ಲದಂಗೈಸುವನು ಕಡು ಹೀಹಾಳಿ ಉಳ್ಳವನು ಈ ಕೀಚಕ ಖುಲ್ಲನಾಯಿಯ ಉಪಟಳವನ್ನೆಲ್ಲ ಆತನಿಗೆ ಹೇಳುತ್ತೇನೆ. ಆತನಲ್ಲಿ ಪ್ರಯೋಜನವಾಗದಿದ್ದರೆ ವಿಷಸೇವನೆ ಮಾಡುತ್ತೇನೆ'ಂದು ನಿಶ್ಚಯಿಸುತ್ತಾಳೆ.

ನಡುರಾತ್ರಿ ಏಕಾಕಿಯಾಗಿ ಹೊರಟು "ವಿವಿಧ ಭಕ್ಷ್ಯಾವಳಿಯ ಬಾಣಸದೊಳಗೆ ಬಂದಳು ಮತ್ತ ಗಜಗಮನೆ". ಅಲ್ಲಿ ಮರುದಿನದ ಪಾಕಕ್ಕೋಸುಗ ತಯಾರಿಸಿದ ಹೇರಳ ಸಜ್ಜು ಸಂಬಾರಗಳನ್ನು ಈಕ್ಷಿಸಿ "ಅರಲರಿದನೊ ಭೀಮನೀ ಸೂದಾರ ವಿದ್ಯೆಯ ಬಾಪು ವಿಧಿಮುನಿದಾರನಾವಂಗದಲಿ ಬರಿಸದು ಶಿವ ಶಿವಾಯೆನುತ ನಾರಿ ನಸುನಗುತೊಳಗೆ ಹೊಕ್ಕಳು" ಭೀಮನ ಪಾಲಿಗೆ ಬಂದ ವಿಚಿತ್ರ ನೌಕರಿಯನ್ನು ಬಗೆದು ಅವನ ಅವನತಿಗಾಗಿ ಅನುತಾಪ ಹೊರಚಿಮ್ಮುವುದರಿಂದ ಅವಳಿಗೆ ಸ್ವಂತ ಯಾತನೆಯಿಂದ ಒಂದು ಮುಹೂರ್ತ ವಿಶ್ರಾಂತಿ. ಬಕಧ್ವಂಸಿ ಬಾಣಸಿಗನೆ! ಗದೆಯನ್ನಲಂಕರಿಸುವ ಕೈಯಲ್ಲಿ ಸಟ್ಟುಗವೆ! ಇಷ್ಟಪಟ್ಟಾಗ ತ್ರಿಶೂಲಧರನಾಗಬಲ್ಲ ತ್ರಿಲೋಕಮಲ್ಲನಿಗೆ ಸೊಂಟದಸುತ್ತ ಅಡಿಗೆ ಭಟ್ಟನ ಜಿಡ್ಡು ಬಟ್ಟೆ ಬಾನಿಯೆ! ವಿಧಿಯ ಆಳಿಕೆ ಎಂತಹ ನಿರಂಕುಶದ ದವಲತ್ತು – ಹೀಗೆ ಯೋಚಿಸುವಾಗ ಒಂದು ಕ್ಷಣ ಶಾಂತಿಯ ನೆರಳು ಅವಳಿಗೆ ದೊರಕಿ, ಇಹ ಸಂಸಾರದ ವಿಕಾರಗಳ ಸಲುವಾಗಿ ತುಸುನಗು ಕೂಡ ಅವಳ ತುಟಿಯ ಮೇಲೆ ಹೊಳೆಯುತ್ತದೆ.

ಈ ಪ್ರಸ್ತಾವದಲ್ಲಿ ದ್ರೌಪದಿಗೆ "ಎಬ್ಬಿಸಲು ಭುಗಿಲೆಂಬನೋ ಮೇಣೊಬ್ಬಳೇತಕೆ ಬಂದೆ ಮೋರೆಯ ಮುಬ್ಬಿದೇಕೆಂದೆನ್ನ ಸಂತೈಸುವನೋ ಸಾಮದಲಿ" ಎಂಬ ಅಂಜಿಕೆ. ಆದ್ದರಿಂದ ಶಂಕಿಸುತ್ತ, ಹೆದರುತ್ತ, ಹಿಂದೆಗೆಯುತ್ತ ಅಡಿಗೆಮನೆಯನ್ನು ಹೊಕ್ಕು ಭೀಮನನ್ನು ಎಬ್ಬಿಸುತ್ತಾಳೆ. ಆದರೇನು? "ಉಸುರಲಾಗದು ನಿನ್ನ ಹರಿಬಕೆ ಮಿಸುಕುವವರಾವಲ್ಲ" ಎಂದು ಆತ ಸೈರಂಧ್ರಿಯ ಮಾತನ್ನು ಕಿವುಡುಗೇಳುತ್ತಾನೆ. ಆಗ ದ್ರೌಪದಿಯು ಆವೇಶಗೊಂಡು ನುಡಿಯ ಕಿಡಿಗಳನ್ನು ಸೂಸುತ್ತಾಳೆ.

ಹೆಂಡತಿಯ ಹರಿಬದಲಿ ಒಬ್ಬನೆ
ಗಂಡನಾದೊಡೆ ವೈರಿಯುಸು ಕಡಿ
ಖಂಡವನು ಮಾಡುವನು ಮೇಣ್
ತನ್ನೊಡಲನಿಕ್ಕುವನು।
ಗಂಡರೈವರು ಮೂರು ಲೋಕದ
ಗಂಡರೊಬ್ಬಳನಾಳಲಾರಿರಿ
ಗಂಡರೋ ನೀವು ಭಂಡರೊ
ಹೇಳೆಂದಳೆಂದುಮುಖಿ॥

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | „ | 40-00 |
| 3. | ಪುಳಿಯೋಗರೆ | „ | 50-00 |
| 4. | ಪೊಂಗಲು | „ | 55-00 |
| 5. | ಸಕ್ಕರಪೊಂಗಲ್ | „ | 65-00 |
| 6. | ಶಾಕರ ಭಾತ್ | „ | 85-00 |
| 7. | ಕೇಸರೀ ಭಾತ್ | „ | 90-00 |
| 8. | ಸೀರ | „ | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಹೀಗೆ ಬಿರುನುಡಿಗಳನ್ನಾಡಿ 'ಸಾವವಳು ನಾನು ನಿಮಗಂಜಲೇಕೆನುತ ಕೊನೆಗೆ ಕಂಬನಿಗರೆದು' ಭೀಮನ ನೇಮವನ್ನು ಕೇಳುತ್ತಾಳೆ. ಆತನ ಚರಣಕೆ ಎರಗುತ್ತಾಳೆ– ಇನ್ನು ಧರ್ಮಿಷ್ಠರಾಗಿ ಹದುಳದಿಂದ ಇರಿ ಎಂದು ಹಾರೈಸಿ ಬೀಳ್ಕೊಳ್ಳ ತೊಡಗುತ್ತಾಳೆ. ಆಕ್ಷಣದಲ್ಲಿ ಆಕೆ ನುಡಿಯುವ ಕರುಣೆ ಮಾತು ಎಂತಹ ಕರುಳನ್ನೂ ತಟ್ಟುವಂತಹುದು.

ಭೀಮ ಕೊಟ್ಟೈ ಎನಗೆ ಸಾವಿನ
ನೇಮವನು ನಿಮ್ಮಣ್ಣನಾಜ್ಞೆ ವಿ
ರಾಮವಾಗದೆ ಬದುಕಿ ಧರ್ಮದ
ವೈಸಿರಿಯನರಿದು ।
ಕಾಮಿನಿಯ ಕೇಳಿಯಲಿ ನೆನೆವುದು
ತಾಮಸದಿ ತಾವೀರಿ ನಡೆದು
ದ್ದಾಮತೆಯ ಸೈರಿಸುವುದೆಂದೆರಗಿದಳು
ಚರಣದಲಿ ॥

ಈಗ ಮಾತ್ರ ಭೀಮನ ವೀರಶ್ರೀ ಉಕ್ಕಿ ಹರಿಯುತ್ತದೆ. ವೀರಕರುಣೆಗಳಿಂದ ಕೂಡಿದ ಅಂತಃಕರಣಗಳಿಂದ ಭೀಮನು ಕಂಬನಿ ದುಂಬಿದನು. ಅಂತಕರಣ ನೆನೆದುದು. ರೋಷದ ಘನತೆ ಹೆಚ್ಚಿ ಹಗೆಗಳನ್ನು ಮನದೊಳಗೆ ಹಿಂಡುತ್ತಾನೆ.

ಬಸುರ ಬಗಿವೆನು ಕೀಚಿಕನ ನಸು
ಮಿಸುಕಿದೊಡೆ ವೈರಾಟ ವಂಶದ
ಹೆಸರ ತೊಡೆವೆನು ನಮ್ಮನರಿದೊಡೆ
ಕೌರವವ್ರಜವ ।
ಕುಸುರಿದರಿವೆನು ಭೀಮ ಕಷ್ಟವ
ನೆಸಗಿದನು ಹಾಯೆಂದರಾದೊಡೆ
ಮುಸುಡನಮರಾದ್ರಿಯಲಿ ತೀವೆನು
ದೇವಸಂತತಿಯ ॥

ಹೀಗೆಂದು ಪ್ರತಿಜ್ಞೆ ಮಾಡಿ ದ್ರೌಪದಿಯನ್ನು ಸಂತೈಸುತ್ತ ಅವಳ ಕುರುಳ ನೇವರಿಸುತ್ತಾನೆ. ಗಲ್ಲವನೊರಸಿ ಮುಂಡಾಡುತ್ತಾನೆ.

ಅರಸಿಬಿಡು ಬಿಡು ಖಾತಿಯನು ವಿ
ಸ್ತರಿಸಲೇಕೆಮ್ಮಣ್ಣನಾಜ್ಞೆಯ
ಗೆರೆಯ ದಾಂಟಿದೆನು ಹೋಗೆಂದನಾ ಭೀಮ

ಅಗ್ರಹಕ್ಕೋಸ್ಕರವೇ ವ್ಯಗ್ರನಾಗುವ ದುರಾಗ್ರಹಿಯಲ್ಲ ದಾಯಾದವಲ್ಲ. ಅಲ್ಲದೆ ಕೃಷ್ಣೆಯನ್ನು ಕುರಿತು ಯುಕ್ತ ಭಾವನೆ ಸೂಕ್ತ ಗೌರವ, ತೀವ್ರ ಕರುಣೆ ಇರುವುದು ಭೀಮನೊಬ್ಬನಲ್ಲಿಯೇ.

ಭಕ್ತೆಯಾದ ದ್ರೌಪದಿಗೆ ತನ್ನ ಸೀಮಿತಗಳ ಅರಿವೂ ಇದೆ. ಸಾಮಾನ್ಯರಂತೆ ತಾನೂ ಚಿತ್ತಚಂಚಲೆ ಎಂಬುದನ್ನೂ ಆಪತ್ತಿನಲ್ಲಿ ನೆನೆವ, ಅಭ್ಯುದಯದಲ್ಲಿ ಮರೆವ ಅಪೂರ್ಣ ಭಕ್ತೆಯ ವ್ಯಕ್ತಿ ಎಂಬುದನ್ನು ಶ್ರೀಕೃಷ್ಣನ ಮುಂದೆ ಒಪ್ಪಿಕೊಳ್ಳುತ್ತಾಳೆ. ದೂರ್ವಾಸಾತಿಥ್ಯ ಪ್ರಸಂಗದಲ್ಲಿ ಶ್ರೀಕೃಷ್ಣನು ದ್ರೌಪದಿಯಲ್ಲಿಗೈತಂದು,

ನಾವು ಹಸಿದೈತ ದರೀಪರಿ
ದೇವಿ ನಾನಾದೂರ ದೂರುವು
ದಾವುದುಚಿತವು ಹೇಳೆನಲು ನಡುನಡುಗಿ
ಕೈಮುಗಿದು
ದೇವ ನಿಮ್ಮಯ ಹಸಿವು ಕಳೆವೊಡೆ
ಭಾವ ಶುದ್ಧಿಯ ಭಕುತಿ ಬೇಹುದು
ನಾವು ಚಂಚಲ ಚಿತ್ತರೆಂದಳು ಕಮಲ
ಮುಖಿ ನಗುತ ॥

ಪರಮಾತ್ಮನಿಗಿರುವುದು ಭಕ್ತಿಯ ಹಸಿವು. ಆದರೆ ಸಾಮಾನ್ಯಳಾದ ತನ್ನಲ್ಲಿ ಭಕ್ತಿ ಅಪಕ್ವವಾಗಿರುವುದನ್ನು ಆಕೆ ಒಪ್ಪಿಕೊಳ್ಳುತ್ತಾಳೆ. ಭಕ್ತರಲ್ಲಿ ಪ್ರಾಮಾಣಿಕತೆ, ಪ್ರಾಂಜಲತೆಗಳೂ ಬೇಕಲ್ಲವೆ? ದ್ರೌಪದಿ ಉತ್ತಮ ಸಂಸ್ಕಾರವಂತೆ "ಮಗಳಹೆನು, ಸೊಸೆ ಇಹೆನು, ನಿಮ್ಮಯ ಮಗನ ಕಣ್ಣಿಗೆ ಕಾಳಕೂಟದ ಮಗಳೊ, ಸೊಸೆಯೋ, ನಾದಿನಿಯೋ, ಬೆಸಗೊಳ್ಳಿ ನಿಮ್ಮವರ" ಎಂದು ದ್ರೌಪದಿ ನುಡಿದರೆ "ಧರ್ಮ ನಿಮ್ಮದು ತಾಯಿ ಕಿಲ್ಬಿಷ ಕರ್ಮ ನಮ್ಮದು" ಎಂದು ಧೃತರಾಷ್ಟ್ರ ಉತ್ತರಿಸುತ್ತಾನೆ. ವನವಾಸದಲ್ಲಿರುವ ಆಕೆಗೆ ಕುಬುದ್ಧಿಯ ಜಯದ್ರಥನು ಪಾವುಡವನೊಪ್ಪಿಸಲು ಬಂದಾಗ ತನಗೆ ಇಂತಹ ಸಂಭಾವನೆಯನ್ನು ಸ್ವೀಕರಿಸುವ ಸ್ವಾತಂತ್ರ್ಯವಿಲ್ಲವೆಂದು ನಯವಾಗಿ ಹೇಳುತ್ತಾಳೆ. "ನಾರ ಸೀರೆಯ ನುಡುವ ಎಮಗೆ ಪತಿವ್ರತಾಗುಣವೇ ಶೃಂಗಾರ ಫಲಮೂಲತತಿಗಳೇ ಆಹಾರ" ಎಂದು ಸೂಚಿಸಿ ಜಯದ್ರಥನು ತಾನು ತಂದ ಪಾವುಡವನ್ನು ಈ ಕ್ಷಣಕೆ ಬಿಜಯಂಗೈಯಲಿರುವ ಪಾಂಡುಕುಮಾರರಿಗೆ ತೋರಿಸುವವರೆಗೆ ವನದೊಳಗೆ ಬೇರೆಡೆಗೆ ಬಿಡಾರವನು ಬಿಡಿ ಎಂದು ನಯವಾಗಿ ಎಚ್ಚರ ನೀಡುತ್ತಾಳೆ. ಒಟ್ಟಿನಲ್ಲಿ ಕುಮಾರವ್ಯಾಸ ಪ್ರಶಸ್ತಿಯಲ್ಲಿ ಸಿ. ಕೆ. ವೆಂಕಟರಾಮಯ್ಯನವರು ಹೇಳಿರುವಂತೆ, 'ದ್ರೌಪದಿಯಲ್ಲಿ ಇಂತಹ ಗುಣಗಳಿರುವುದರಿಂದ ಸಮಯ ಬಂದರೆ ಸತ್ವಶಾಲಿನಿಯಾಗಿ ಪ್ರಭುತ್ವವನ್ನು ಬೇಕಾದರೂ ವಹಿಸಿ, ಘನತೆ ಗಾಂಭೀರ್ಯಗಳ ಗಣಿಯೆನಿಸುವ ಹಾಗೆ ರಾಜ್ಯವನ್ನಾಳಬಲ್ಲಳೆಂಬ ಭಾವನೆಯನ್ನುಂಟು ಮಾಡಬಲ್ಲವಳು', ಗದುಗಿನ ಗಂಡು ಕವಿ ನಮ್ಮ ಕುಮಾರವ್ಯಾಸನು ರಚಿಸಿರುವ ದ್ರೌಪದಿ. ★

**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

# ಪಂಚಮುಖಿ ಆಂಜನೇಯ

ಚಿಕ್ಕ ಹಳ್ಳಿಯಿಂದ ಹಿಡಿದು ದೊಡ್ಡ ಪಟ್ಟಣದವರೆಗೆ ಆಂಜನೇಯ ದೇವಾಲಯಗಳನ್ನು ನಾವು ಕಾಣಬಹುದು. ಭಾರತದಲ್ಲಿ ಆಂಜನೇಯನ ಗುಡಿಯಿಲ್ಲದ ಗ್ರಾಮವಿಲ್ಲ, ಪಟ್ಟಣವಿಲ್ಲ. ಹಿಂದೂಗಳಲ್ಲಿ ಇವನನ್ನು ಪೂಜಿಸಿದ ವ್ಯಕ್ತಿಯಿಲ್ಲ. ಇವನು ಸರ್ವ-ಜನ ಪೂಜಾಭಾಜನ. ಭಾರತದಲ್ಲಿ ಆಂಜನೇಯನಿಗಿರುವಷ್ಟು ದೇವಾಲಯಗಳು ಇನ್ನಾವ ದೇವರಿಗೂ ಇಲ್ಲವೆಂದು ಧಾರಾಳವಾಗಿ ಹೇಳಬಹುದು.

ಇವುಗಳಲ್ಲಿ ಪ್ರಸಿದ್ಧವಾದವು ಮುಳಬಾಗಿಲಿನ ಆಂಜನೇಯಸ್ವಾಮಿ, ರಾಯಚೂರು ಜಿಲ್ಲೆಯ ಗಂಗಾವತಿಗೆ ಹತ್ತಿರದಲ್ಲಿರುವ ನವಲಿ ಎಂಬ ಗ್ರಾಮದಲ್ಲಿ ಜನಮೇಜಯ ರಾಯನ ಕರಾರ್ಚಿತವೆಂದು ಹೇಳುವ 'ಭೋಗಾಪುರೇಶ' ಎಂಬ ಹೆಸರಿನ ಮುಖ್ಯಪ್ರಾಣ, ರಾಯಚೂರು ಜಿಲ್ಲೆಯ ಕುಷ್ಟಗಿ ಎಂಬ ಊರಿನ ಹೊರ ಭಾಗದಲ್ಲಿ ಆಗ್ನೇಯ ದಿಕ್ಕಿಗೆ ನಮಗೆ ಕಾಣುವ ದೇವಾಲಯದಲ್ಲಿ 'ಅಡವಿರಾಯ' ಎಂಬ ಹೆಸರಿನ ಮುಖ್ಯಪ್ರಾಣ, ಚಿತ್ರದುರ್ಗ ಜಿಲ್ಲೆಯ ಬೊಮ್ಮಗಟ್ಟೆಯಲ್ಲಿ ವಿರಾಜಮಾನನಾದ ಹುಲಿಕುಂಟೇರಾಯನೆಂಬ ಹೆಸರಿನ ಮುಖ್ಯಪ್ರಾಣ, ಹಂಪೆಯ ಚಕ್ರ ತೀರ್ಥದ ದಡದಲ್ಲಿರುವ ಮಾತಂಗ ಬೆಟ್ಟದ ಮೇಲೆ 'ಯಂತ್ರೋದ್ಧಾರ' ನಾಮಕ ಪ್ರಾಣದೇವ, ತುಮಕೂರಿನ ಜಗನ್ನಾಥ ಪುರಿಯಲ್ಲಿ ಬಯಲಾಂಜನೇಯನೇಯ ಸ್ವಾಮಿ ಎಂದು ಪ್ರಸಿದ್ಧನಾದ ಮುಖ್ಯ ಪ್ರಾಣ– ಹೀಗೆ ಇನ್ನೂ ಎಷ್ಟೋ ದೇವಾಲಯಗಳ ವಿವಿಧ ಭಂಗಿಗಳಲ್ಲಿರುವ ಆಂಜನೇಯನನ್ನು ನಾವು ಕಾಣಬಹುದು. ಅಲ್ಲದೆ ಶ್ರೀರಾಮಾಲಯಗಳಲ್ಲಿ ಸಾಧಾರಣವಾಗಿ ನಾವು ಆಂಜನೇಯ ವಿಗ್ರಹಗಳನ್ನು ಕಾಣಬಹುದು.

ಭಾರತದಲ್ಲಿ ಇವನ ಭಕ್ತರಿಲ್ಲದ ಮನೆಯಿಲ್ಲ. ಆಂಜನೇಯಸ್ವಾಮಿ ದೇವಾಲಯಗಳು ದೇಶಾದ್ಯಂತವಿದ್ದರೂ ಒಂದೇ ಒಂದು ಕೊಠಡಿ ಇರುವ ಚಿಕ್ಕ ಗುಡಿಗಳೇ ಹೆಚ್ಚು. ಮಹಾದ್ವಾರ, ಸಭಾಮಂಟಪ, ವಿಮಾನ ಮುಂತಾದ ಭವ್ಯತೆ ಬಹು ಅಪರೂಪ, ಬಯಲಾಂಜನೇಯ ಗುಡಿಗಳಂತೂ ಅಸಂಖ್ಯಾತ. ಶ್ರೀವ್ಯಾಸರಾಜರು ನಾಡಿನ ವಿವಿಧ ಭಾಗಗಳಲ್ಲಿ ಕ್ರಿ.ಶ. 1500 ರಲ್ಲಿ 732 ಪ್ರಾಣದೇವರ ಮೂರ್ತಿಗಳನ್ನು ಪ್ರತಿಷ್ಠಿಸಿದರು ಎಂದು ಸೋಮನಾಥಕವಿ ಹೇಳುತ್ತಾನೆ.

ಹಿಂದೂ ದೇವತೆಗಳಲ್ಲಿ ಮೃಗ, ವೃಕ್ಷ, ಪಕ್ಷಿ, ಪಶುಗಳಿಗೆಲ್ಲ ಸ್ಥಾನ ಉಂಟು. ಹೀಗೆಯೇ ವಾನರನಾದ ಆಂಜನೇಯನಿಗೆ ಸಹ ದೇವತಾಪಟ್ಟ ಕಟ್ಟಿದವನು ವಾಲ್ಮೀಕಿಯೇ.

ಪ್ರಾಣದೇವರ ಪ್ರಾಮುಖ್ಯತೆಯನ್ನು, ಭಕ್ತಾಪರಾಧೀನತೆಯನ್ನೂ ಚಿತ್ರಿಸುವ ಗ್ರಂಥಗಳು ಹೈಂದವ ಸಾಹಿತ್ಯದಲ್ಲಿ ಎಷ್ಟೋ ಇವೆ. ಇಂತಹ ಸಾಹಿತ್ಯದಲ್ಲಿ ದ್ವೈತ ಸಿದ್ಧಾಂತದ ಸಂಪ್ರದಾಯವಾಗಿ ಆಂಜನೇಯನು ಪರಮಾತ್ಮನ ಸೇವಾರ್ಥವಾಗಿ ಹನುಮ, ಭೀಮ, ಮಧ್ವ ಎಂಬ ಮೂರು ಮುಖ್ಯವಾದ ಅವತಾರಗಳನ್ನು ಮಾಡಿದ್ದಾನೆ ಎಂಬುದು ಸರ್ವಪ್ರಸಿದ್ಧವಾದ ವಿಷಯ.



ರಾಮದೇವರ ವಚನವನ್ನು ಸೀತಾದೇವಿಗೆ ತಂದಿತ್ತಿರುವ ಹನುಮ ರೂಪವು ವಾಯುದೇವರ ಮೊದಲನೆಯ ರೂಪವು. ಕೌರವ ಸೇನಾಕ್ಷಯವನ್ನು ಮಾಡಿ ಪ್ರಸಿದ್ಧವಾದ ಭೀಮಸೇನ ರೂಪವು ಎರಡನೆಯದು. ಯಾವೊಂದು ಮಧ್ವರೂಪದಿಂದ ಆನಂದಕರ ಶಾಸ್ತ್ರವನ್ನು ಮಾಡಿರುವುದೋ ಈ ಮಧ್ವ ರೂಪವು ಮೂರನೆಯದು.

ಹನುಮದವತಾರದ ವಿವರವಾದ ವಿಷಯವನ್ನು ರಾಮಾಯಣದಲ್ಲಿಯೂ, ಭೀಮಾವತಾರದ ಕಾರ್ಯವನ್ನು ಭಾರತದಲ್ಲಿಯೂ, ಮಧ್ವಾವತಾರದ ಸಂಪೂರ್ಣ ಚಿತ್ರವನ್ನು ಶ್ರೀ ಸುಮಧ್ವವಿಜಯವೆಂಬ ಗ್ರಂಥದಲ್ಲಿಯೂ ನಾವು ಕಾಣಬಹುದು.

ಕರ್ನಾಟಕ ಹರಿದಾಸರೆಲ್ಲರೂ ಆಂಜನೇಯನನ್ನು ಕುರಿತು ಹಾಡಿದ್ದಾರೆ. ಹನುಮಾನ್ ಪರಮ ಭಕ್ತ, ಮಹಾವೀರ, ಸಂಗೀತ– ನಾಟ್ಯ ಶಾಸ್ತ್ರಗಳನ್ನೂ ಅರಿತಿದ್ದ ಕೋವಿದ ಮತ್ತು ವೇದಾಂತಿ. ದಾಸರಲ್ಲಿ ಅಗ್ರಗಣ್ಯ; ಭೃತ್ಯರಲ್ಲಿ ಉತ್ತಮ ಭೃತ್ಯ. ಆಂಜನೇಯನ ಗುಡಿ ಮತ್ತು ವಿಗ್ರಹಗಳ ಲಕ್ಷಣದಲ್ಲೂ ಒಂದು ವಿಶೇಷವಿದೆ. ಸಾಮಾನ್ಯವಾಗಿ ಈ ದೇವಾಲಯಗಳು ದಕ್ಷಿಣಾಭಿಮುಖವಾಗಿದ್ದು ಮೂರ್ತಿಯ ಮುಖ ಪೂರ್ವದಿಕ್ಕಿರುವುದೇ ಹೆಚ್ಚು. ಸಾಧಾರಣವಾಗಿ ಆಂಜನೇಯನನ್ನು ಮಹಾವೀರನಾಗಿ ಚಿತ್ರಿಸಿರುವ ಮೂರ್ತಿಗಳನ್ನು ಪ್ರತಿ ದೇವಾಲಯಗಳಲ್ಲೂ ನಾವು ಕಾಣುತ್ತೇವೆ. ಶಿಲ್ಪ ಮತ್ತು ಶಾಸ್ತ್ರಗಳಲ್ಲಿ ಇವರ ವಿಗ್ರಹ ಲಕ್ಷಣಗಳ ಬಗ್ಗೆ ದೊರೆವ ವಿವರಗಳು ಬಹು ಸ್ವಲ್ಪ. ಇವನನ್ನು ಭಕ್ತನನ್ನಾಗಿ ಚಿತ್ರಿಸಿರುವುದೇ ಹೆಚ್ಚು. ಶ್ರೀರಾಮ ಸಾನ್ನಿಧ್ಯದಲ್ಲಿ

**ಶ್ರೀ ಕೆ. ವಾದಿರಾಜಾರಾವ್**

ಅಥವಾ ವಿಷ್ಣು ದೇವಾಲಯಗಳ ಪ್ರಾಕಾರಗಳಲ್ಲಿ ಹನುಮನನ್ನು ನಮ್ರ ಭೃತ್ಯನಾಗಿಯೂ, ಪ್ರತ್ಯೇಕವಾಗಿ ಅವನೇ ಪ್ರಧಾನ ದೇವತೆಯಾಗಿರುವೆಡೆ ವೀರನಂತೆ ಚಿತ್ರಿಸಿರುವುದನ್ನೂ ನಾವು ಕಾಣಬಹುದು.

ಈ ವಿಧವಾಗಿ ಶ್ರೀ ಆಂಜನೇಯಸ್ವಾಮಿ ದೇವಾಲಯಗಳು ವಿವಿಧ ಭಂಗಿಮೆಯಲ್ಲಿರುವುದನ್ನು ನಾವು ಕಾಣಬಹುದು.

ಇವುಗಳಲ್ಲಿ ವಿಶೇಷವಾಗಿ ಕಾಣಿಸುವುದು, ಶ್ರೀ ಆಂಜನೇಯಸ್ವಾಮಿಗೆ ಐದು ಮುಖಗಳು ಇದ್ದಂತೆ ತೋರುವಿಕೆ. ಅಸ್ಖಲಿತ ಬ್ರಹ್ಮಚಾರಿ. ಜಿತೇಂದ್ರಿಯನೂ ಆದ ಇವನ ಪಂಚಮುಖಗಳು ಪಂಚೇಂದ್ರಿಯ ಮೇಲೆ ಇವನು ಸಾಧಿಸಿದ ವಿಜಯಗಳಿಗೆ ಸಂಕೇತ ಎಂದು ಹೇಳುತ್ತಾರೆ. ಹನುಮಂತನ ವ್ಯಕ್ತಿತ್ವ ರಾಮಾಯಣದ ಸುಂದರಕಾಂಡದಲ್ಲಿ ಬಹು ಸುಂದರವಾಗಿ ಚಿತ್ರಿಸಲ್ಪಟ್ಟಿದೆ. ಈ ಕಾಂಡದಲ್ಲಿ ಹನುಮಂತನು ಮಹಾಯೋಗಿ, ಕುಂಡಲಿನೀ ಯೋಗಸಾಧನೆಯಲ್ಲಿ ಇವನು ನಿಷ್ಣಾತನು, ಎಂದು ಗೋಪ್ಯವಾಗಿದ್ದ ಆಧ್ಯಾತ್ಮಿಕಾರ್ಥವನ್ನು ಹೇಳುತ್ತದೆಯೆಂದು ವಿಮರ್ಶಕರು ಭಾವಿಸುತ್ತಿದ್ದಾರೆ. ಪ್ರಾಣಿ ಜೀವಿಸುವುದಕ್ಕೆ ಅತಿ ಮುಖ್ಯವಾದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಪಂಚಪ್ರಾಣಗಳ ವಿಷಯವಾಗಿ, ಅದರ ಮೇಲೆ ಅವರಿಗಿರುವ ನಿಯಂತ್ರಣ ಶಕ್ತಿಯನ್ನು ಪಂಚಮುಖಗಳು ನಿರ್ದೇಶಿಸುತ್ತಿರುವುವು ಎಂದು ಹೇಳಲ್ಪಟ್ಟಿದೆ.

ಪಂಚಮುಖ ಪ್ರಾಣದೇವರ ಮೇಲೆ ಆಧ್ಯಾತ್ಮಪರವಾಗಿ ಎಷ್ಟೋ ಅರ್ಥಗಳು ಇದ್ದರೂ, ಮುಖ್ಯ ಪ್ರಾಣದೇವರ ಆಲಯಗಳು ದೇಶಾದ್ಯಂತವಿದ್ದರೂ, ಪಂಚ ಮುಖಗಳಿಂದ ಕೂಡಿದ ಆಲಯ ಕೆಲವೇ ಇವೆ. ತಾಂತ್ರಿಕರು ಪಂಚಮುಖಹನುಮಾನನನ್ನು ಅನುಷ್ಠಾನ ಮಾಡುತ್ತಾರೆ.

ರಾಯಚೂರಿಂದ ಮಂತ್ರಾಲಯಕ್ಕೆ ಹೋಗುವ ಮಾರ್ಗದಲ್ಲಿ 'ಗಾಣಧಾಳ' ಎಂಬ ಗ್ರಾಮವಿದೆ. ಆ ಗ್ರಾಮದಲ್ಲಿ ಪಂಚಮುಖ ಪ್ರಾಣೇಶನೆಂಬ ಹೆಸರಿನಿಂದ ಪ್ರಸಿದ್ಧನಾದ ಶ್ರೀಪ್ರಾಣದೇವರನ್ನು ನಾವು ಕಾಣಬಹುದು. ಮಂತ್ರಾಲಯದ ಬಳಿ ಶ್ರೀ ರಾಘವೇಂದ್ರ ಸ್ವಾಮಿಗಳವರು ತಪಸ್ಸು ಮಾಡುತ್ತಿದ್ದರೆಂದು ಹೇಳಲಾದ ಗುಹಾಲಯದ ಬಂಡೆಯ ಮೇಲೆ ಇಂಥಾ ಮೂರ್ತಿ ಇದೆ ಎಂದು ಹೇಳುತ್ತಾರೆ. ಕಲಿಯುಗದ ಕಲ್ಪತರುವೆಂದು ಪ್ರಸಿದ್ಧಿಯಾದ, ಸಜೀವ ಸಮಾಧಿಯಾದ ಶ್ರೀ ರಾಘವೇಂದ್ರಸ್ವಾಮಿಗಳವರು ನೆಲೆಸಿರುವ ಮಂತ್ರಾಲಯ ಕ್ಷೇತ್ರಕ್ಕೆ ಬಂದ ಯಾತ್ರಿಕರು ಗಾಣಧಾಳದ ಪಂಚಮುಖೀ ಪ್ರಾಣದೇವರ ದರ್ಶನವನ್ನು ಪಡೆದು ಹೋಗುವುದು ಇಂದಿಗೂ ರೂಢಿಯಾಗಿದೆ. ಮಂತ್ರಾಲಯದಿಂದ ನೇರವಾಗಿ ಗಾಣಧಾಳಕ್ಕೆ ಬಸ್ ಸೌಕರ್ಯಗಳು ಇಲ್ಲದಿದ್ದರೂ ಟಾಕ್ಸಿ ಮತ್ತು ಇತರ ವಾಹನಗಳ ಸೌಕರ್ಯಗಳುಂಟು. ದಶಕಂಠ ರಾವಣನ ಸಂಹಾರಾರ್ಥವಾಗಿ ಹನುಮಂತನು ಶ್ರೀರಾಮನ ಆಜ್ಞಾನುಸಾರವಾಗಿ ಪಂಚಮುಖಿಯಾಗಿ ಪ್ರಕಟನಾದನೆಂದು ಪುರಾಣಾಂತರಗಳು ಹೇಳುತ್ತವೆ.

ಈ ಪಂಚಮುಖ ಪ್ರಾಣದೇವರ ಪೂರ್ವ ಮುಖ ಕಪಿ, ದಕ್ಷಿಣ ಮುಖ ಕರಾಳ ನೃಸಿಂಹ, ಪಶ್ಚಿಮ ಮುಖ ವೀರ ಗರುಡ, ಉತ್ತರ ಮುಖ ವರಾಹ, ಊರ್ಧ್ವ ಮುಖ ಹಯಗ್ರೀವ, ದಶ ಭುಜಗಳು, ದಶ ಆಯುಧಗಳು, ಇರುವುವು. ಇವನ ದರ್ಶನಾರ್ಥವಾಗಿ ಬಂದ ಭಕ್ತರಿಗೆ ಇವನ ರೂಪ ಸ್ಪಷ್ಟವಾಗಿದೆ. ಯಾತ್ರಿಕರಿಗೆ ಇಲ್ಲಿ ಯಾವ ವಿಧವಾದ ಸೌಕರ್ಯಗಳು ಇಲ್ಲ, ದರ್ಶನ ಪಡೆದು ನಂತರ ಮಂತ್ರಾಲಯಕ್ಕೇ ಹಿಂದಿರುಗಬೇಕು.

ಪ್ರಾಣದೇವರ ಮೇಲೆ ಹರಿದಾಸರು ಹಾಡಿದ ಹಾಡುಗಳು ಬಹುವಾಗಿ ಇದ್ದರೂ ಪಂಚಮುಖೀ ಪ್ರಾಣದೇವರ ಮೇಲೆ ರಚಿಸಿದ ಕೃತಿಗಳು ಹೆಚ್ಚಿಗೆ ಕಾಣುವುದಿಲ್ಲ. ಆದರೆ ಕರ್ನಾಟಕ ಹರಿದಾಸ ಪಂಥದಲ್ಲಿ ಬಂದ ' ಶ್ರೀಗುರು ಇಂದಿರೇಶರು ' ಪಂಚಮುಖೀ ಪ್ರಾಣದೇವರ ಮೇಲೆ ರಚಿಸಿದ ಕೃತಿಯನ್ನು ನಾವು ನೋಡಬಹುದು.

ಪಾಲಿಸು ಪವಮಾನನೇ ಪಂಚಾಸ್ಯ ವಿ–
ಕಾಲ ಮಹಿಮ ದೇವನೇ ‖ ಪಲ್ಲವಿ ‖

ನೀಲನಳ ಕುಮುದಾಂಗದಾದಿ ಸು–
ಶೀಲಕಪಿವರವಿನುತ ಪದ
ಕೀಲಾಲಜಂಗಳಿಗೆರಗಿ ತುತಿಪೆ ತ್ರಿ
ಕಾಲದಲಿ ಗಾಣಧಾಳ ನಿಲಯನೆ ‖ಅ.ಪ.‖

ಅನಿಮಿತ್ತ ಬಂಧು ನೀನೆ ಜೀವೋತ್ತಮ
ಅನಿಮಿಷರೊಳು ವಂದ್ಯನೇ
ಜನಕನಪ್ಪಣೆ ತಾಳಿ ರಾಮ ವನವನೆ
ಚರಿಸಲು
ಕ್ಷಣದೊಳುದಧಿ ದಾಂಟಿ
ಜನಕನ ಕುವರಿಯ
ಘನಸುವಾರ್ತೆಯ ತಿಳಿಸಿ ಕಾಕುಸ್ಥನ
ಮನಕೆ ಪ್ರೀತಿಯಗೊಳಿಸಿ ಸ್ವಸನ
ತನಯ ಪೆಸರಳಿವಿ ಸೌಮಿತ್ರಿಯ
ಘನತೆ ರಣದಿ ತಿಳಿಸಿ
ಅನವರತ ಕಿಂಪುರಷ ಖಂಡದಿ
ವನಜನಿಲಯನ ಪದಸರೋಜನ
ವಿನುತ ರಘುವರ ಮಂತ್ರ ಜಪಿಸಲು
ಪ್ರಣತ ಕಾಮದನೆನಿಪ ಹನುಮನೆ ‖



ಪಂಚಮುಖಿಪ್ರಾಣದೇವರ ಚಿತ್ರವನ್ನು ನೋಡಿದ ಕೂಡಲೇ, ಶತಾವಧಾನಿ ಶ್ರೀ ಗೌರಿಪೆದ್ದಿ ರಾಮಸುಬ್ಬಶರ್ಮರವರು ಶಾರ್ದೂಲದಲ್ಲಿ ಪಂಚಮುಖೀ ಪ್ರಾಣದೇವರ ಮೇಲೆ ಮಾಡಿದಂತಹ ಆಶು ಕವಿತ್ವವನ್ನು ನಾವು ಇಲ್ಲಿ ಕಾಣಬಹುದು.

ಶ್ರೀಮದ್ವಾಯುತನೂಜವಕ್ತ್ರಮಪಿ ತತ್ಪಾರ್ಶ್ವಾಭ್ಯಾಂ ನೃಸಿಂಹನ್‌ತಥಾ–
ವಾಚ್ಯಾಂ ಶ್ರೀಗರುಡಂ ಚ ಪಶ್ಚಿಮತಲೇ ಕೋಲಂ ಹ್ಯುದೀಚ್ಯಾಂವಹನ್ |
ಊರ್ಧ್ವೇ ಶ್ರೀಹಯಕಂಠವಕ್ತ್ರಮಪಿ ತದ್ಹಸ್ತೇಷು ನಾನಾಯುಧಾನ್
ಬಿಭ್ರಾಣಂ ಪ್ಲವಗೇಶ್ವರಂ ದಶಭುಜಂ ಪಂಚಾಸ್ಯಮೀಡೇಽನ್ವಹಮ್ ‖

— ಶ್ರೀ ಗೌರಿಪೆದ್ದಿ ರಾಮಸುಬ್ಬಶರ್ಮ.

ಓಂ ನಮೋ ವೀರ ಹನುಮ ಶ್ರೀರಾಮಚರಣನಿವಾಸ
ಓಂ ನಮೋ ಚಿರಂಜೀವಿ ಕೋಟಿಸೂರ್ಯಪ್ರಕಾಶ
ಓಂ ನಮೋ ವಾಯುಪುತ್ರ ಸಕಲವಿಘ್ನವಿನಾಶ
ಓಂ ನಮೋ ಸರ್ವಾಂತರ್ಯಾಮಿ ದೀನಜನಸಂಪೋಷ ॥

ನಮೋ ವಾನರರೂಪಿ ವೀರ ಪ್ರತಾಪಿ ಮಹಾಶಕ್ತ
ನಮೋ ಅಂಜನಾಪುತ್ರ ಸುಗಾತ್ರ ಶ್ರೀರಾಮ ಭಕ್ತ
ನಮೋ ಸುಜ್ಞಾನ ಸಿಂಧು ದೀನ ಬಂಧು ಆಶಾಮುಕ್ತ
ನಮೋ ಹನುಮಂತ ಬಲವಂತ ರಾಮವಿಷಯಾಸಕ್ತ ॥ 2

ಸಾಗರಸಮಗಂಭೀರ ಸುಗ್ರೀವನನುಚರ ಸೌಮ್ಯರೂಪಿ
ಯೋಗ ನಯನ ಮನೋನಂದನ ನಮೋ ವೀರ ಪ್ರತಾಪಿ
ಭೋಗದೂರನೆ ರೋಗನಿವಾರಕನೆ ಭವವೈದ್ಯರೂಪಿ
ರಾಗರಹಿತ ನಮೋ ಅಣುರೇಣುತೃಣಕಾಷ್ಠದಿಹ ವಿಶ್ವವ್ಯಾಪಿ॥

ರಾಮಸೇವಾಸಕ್ತ ಭಕ್ತರಾಭಕ್ತ ದೀನಜನ ಸಂಪೋಷನೆ
ಕಾಮನಂ ಗೆಲ್ದು ಪ್ರೇಮದಿಂ ಬಾಳ್ದ ವರಯೋಗೀಶನೆ
ರಾಮನಾಮವೆ ತಾರಕವೆಂದ ದೇವ ಅವತಾರ ಪುರುಷನೆ
ಪ್ರೇಮದಿಂ ನುತಿಸುವೆವು ಹನುಮಂತ ಏಳು ಬೆಳಗಾಯಿತು ॥

ಪದುಮನಾಭನ ಪುಣ್ಯಪುರುಷನ ಲೀಲೆಯನು ಪಾಡುತೆ
ಪದ್ಮಾಸನವ ಹಾಕಿ ಅಂಜನಾದ್ರಿಯಲಿ ನೀನು ಕುಳಿತೆ
ವಿಧವಿಧದಿ ನುತಿಸುತೆ ರಾಮರಾಮ ಎಂದು ಮೈಯಮರೆತೆ
ವಿಧಾತ ಶ್ರೀ ವೀರಹನುಮನೆ ಏಳು ಬೆಳಗಾಯಿತು ॥ 5

## – “ ಕವಿತಾಕೃಷ್ಣ ”

ವಾಗೀಶ ಯೋಗೀಶ ಲೋಕೇಶ ಪ್ರಭೋ ಪುಣ್ಯ ಪುರುಷ
ರಾಗ – ಭೋಗಗಳ ದೂರಿಟ್ಟ ಚೇತನಲೀಲಾವಿಲಾಸ
ನಿಗಮಗೋಚರ ಕರುಣಾಪಾರ ಮಹಾನ್ ಸಾಹಸ
ಮಂಗಳಾಂಗನೆ ಸಿರಿ ವೀರಹನುಮನೆ ಏಳು ಬೆಳಗಾಯಿತು॥6

ಸಮೀರಾತ್ಮಜನೆ ವಾನರ ಪ್ರಮುಖನೆ ವ್ಯಾಕರಣ ಕೋವಿದನೆ
ರಾಮ ರಾಮ ಎಂದು ಚಿರಂಜೀವಿಪದ ಪಡೆದ ಗುಣವಂತನೆ
ನಾಮಧಾರಿ ತತ್ತ್ವವಿಚಾರಿ ದೇವಾ ಮುಕ್ತಿಪ್ರದಾಯಕನೆ
ನಮಿಸುವೆ ಚರಣಕಮಲಕೆ ಹನುಮ ಏಳು ಬೆಳಗಾಯಿತು॥7

ಶುಕ ಪಿಕ ಕಾಜಾಣ ಹಂಸಗಳು ಗರಿಗೆದರಿ ಹಾರುತಿಹವು
ಲೋಕವೊಡೆಯನೆ ನಿನಗೆ ಸುಪ್ರಭಾತವ ಪಾಡುತಿಹವು
ಏಕೈಕವೀರ ಶೋಕದೂರ ಎಂದು ಮೊರೆಯನಿಡುತಿಹವು
ಭಕ್ತಾಗ್ರೇಸರ ಕಾರಂಜಿ ಹನುಮ ಏಳು ಬೆಳಗಾಯಿತು ‖ 8

ಪ್ರಿಯ ಮಿತ್ರ ಸುಗ್ರೀವ ನಿನ್ನ ಸಲಹೆಯಂ ಬೇಡಿ ಬಂದಿಹನು
ವಯೋವೃದ್ಧ ಜಾಂಬವ ಅರ್ಪಿಸೆ ಪೂಮಾಲೆಯ ತಂದಿಹನು
ಜಯ ಜಯ ಹನುಮನೆಂದು ಅಂಗದ ಕರಗಳ ಕೂಡಿಸಿಹನು
ಜೀಯ ಮೂಡಲಬಾಗಿಲ ಹನುಮ ಏಳು ಬೆಳಗಾಯಿತು॥ 9

ಸಿರಿಲಕುಮಿಯೊಡಗೂಡಿ ನರಹರಿ ನಗುತ ಬಂದಿಹನು
ಸರಸತಿಯೊಡಗೂಡಿ ಬ್ರಹ್ಮದೇವನು ಬಂದು ನಿಂದಿಹನು
ವರ ಅಂಬಿಕೆ ಗಣಪ ಸಹಿತ ಶಿವನು ಮುದವ ತಂದಿಹನು
ಕರುಣಾನಿಧಿ ಕೆಂಗೆಲ್ಲ ಹನುಮ ಏಳು ಬೆಳಗಾಯಿತು ॥ 10

ಸನಕಾದಿ ಮುನಿಗಣ ಗಗನದಲಿ ಹರುಷದಿಂ ನಿಂದಿಹುದು
ವನರಾಜಿ ತಲೆದೂಗಿ ಹರುಷದಿಂ ಹೂಮಳೆಯ ಕರೆದಿಹುದು
ಮುನಿವ್ಯಾಸ ವಾಲ್ಮೀಕಿ ಕವಿ ಪಡೆಯೆ ಬೀಡುಬಿಟ್ಟಿಹುದು
ಚಿನ್ಮಯ ಚಿರಂಜೀವಿ ಹನುಮ ಏಳು ಬೆಳಗಾಯಿತು ॥ 11

ಕಾವೇರಿ–ಕೃಷ್ಣೆ–ಗಂಗೆ– ತುಂಗೆಯರು ಜೊತೆಗೂಡಿ
ಬಂದಿಹರು
ದೇವ ನಿನ್ನ ಪಾದ ಕಮಲಗಳ ಒಲುಮೆಯಿಂ
ತೊಳೆಯುತಿಹರು
ಸೇವಂತಿಗೆ ಜಾಜಿ ಪುನ್ನಾಗ ಮಲ್ಲಿಗೆ ಮಾಲೆಗಳಕಟ್ಟಿ
ತಂದಿಹರು
ಕೈವಲ್ಯ ನಿಧಿ ಶೂಲದ ಹನುಮ ಏಳು ಬೆಳಗಾಯಿತು ॥ 12

ಉದಯ ರವಿ ಮೂಡಿದನು ನಿನ್ನ ದರುಶನ ಬಯಸಿ
ಸದಮಲನ ನುತಿಸುತಿಹವು ಪಕ್ಕಿಗಳು ಹರ್ಷಿಸಿ
ವದನಾರವಿಂದ ಸ್ಪರ್ಶಿಸೆ ತೀಡುತಿಹ ವಾಯುದೇವ ಸುಖಿಸಿ
ಆದಷ್ಟು ಬೇಗೇಳು ಹನುಮ ಬೆಳಗಾಯಿತು ॥ 13




ತುಂಗಭದ್ರೆಯಲಿ ಮಿಂದು ಋಷ್ಯಮೂಕದಿ ನೆಲಸಿದೆ
ಮಂಗಳಾಂಗ ಶ್ರೀರಾಮನ ಸಿರಿಮೊಗವಕಂಡು ಹರ್ಷಿಸಿದೆ
ರಂಗ ಶ್ರೀರಂಗನೆಂದು ನುತಿಸಿ ತನುಮನವನರ್ಪಿಸಿದೆ
ಕಂಗೊಳಿಪ ಕಮನೀಯ ಹನುಮ ಏಳು ಬೆಳಗಾಯಿತು॥ 14

ರೋಮ ರೋಮದಲಿ ಕೋಟಿ ಲಿಂಗವನು ಧರಿಸಿದೆ
ಭೀಮಾನುಜನ ಪುರುಷಾಮೃಗನಿಂ ನೀ ರಕ್ಷಿಸಿದೆ
ಪ್ರೇಮದಿಂ ಪೊರೆದೆ ಭಕ್ತ ಕೋಟಿಯ ಉದ್ಧರಿಸಿದೆ
ಸೀಮಾಪುರುಷ ಕಲಿಹನುಮ ಏಳು ಬೆಳಗಾಯಿತು ॥ 15

ಸಿರಿ ರಘುರಾಮನಾ ಪ್ರಿಯನೆ ಕಿಷ್ಕಿಂದೆಯನು ಸೇರಿದೆ
ವರ ವಾನರ ಸುಗ್ರೀವಂಗೆ ಆಪ್ತ ಸಖ ನೀನಾದೆ
ಕರುಣಾಳು ಬೆಳಕಾಗಿ ವಾನರ ಕುಲಕೆ ಒಡೆಯನಾದೆ
ಶರಣು ಸರ್ವಪುರವಾಸ ಹನುಮ ಏಳು ಬೆಳಗಾಯಿತು ॥ 16

ರಾಮ ಕಾರ್ಯಕೆ ನಡುಕಟ್ಟಿ ನಿಂದ ದಿಟ್ಟ ಸಾಹಸಿಗನೆ
ಭೀಮ ರೂಪದಿ ಸಾಗರದ ದಾಂಟಿದ ವಾನರ ಶ್ರೇಷ್ಠನೆ
ಕಾಮರೂಪಿಗಳ ಲಂಕೆಯಲಿ ಅಣುವಾಗಿ ನಡೆದವನೆ
ಪ್ರೇಮ ಮಾರುತಿ ತಂದೆ ಕಲಿ ಹನುಮ ಏಳು ಬೆಳಗಾಯಿತು

ಲಂಕಿಣಿಯ ಕುಟ್ಟಿ ರಾವಣನ ಸೊಕ್ಕು ಮುರಿದೆ
ಲಂಕಾಪುರಕೆ ಲಾಂಗೂಲದಿ ಅಗ್ನಿಯಂ ಸ್ಪರ್ಶಿಸಿದೆ
ಶಂಕೆಯಲಿ ಬಂದು ನೀ ಭೂಜಾತೆಯನ್ನು ದರ್ಶಿಸಿದೆ
ಶಕಪುರುಷ ದಿವ್ಯ ಹನುಮ ಏಳು ಬೆಳಗಾಯಿತು ॥ 18

ಸೀತೆಯ ಚೂಡಾಮಣಿಯ ತಂದು ರಘುರಾಮಗಿತ್ತೆ
ನೀತಿನುಡಿಪೇಳಿ ರಾಮಂಗೆ ದೇವಂಗೆ ಧೈರ್ಯವಿತ್ತೆ
ಖ್ಯಾತ ವಾನರರೊಡಗೂಡಿ ಸೇತು ನಿರ್ಮಿಸೆ ಅಭಯವಿತ್ತೆ
ಕೈತ ಶರಧಿನಿವಾಸ ಕಲಿ ಹನುಮ ಏಳು ಬೆಳಗಾಯಿತು ॥ 19

ಸಾಗರವ ದಾಂಟಿ ಹೊನ್ನಾಗರವ ಸೇರಿದಾ ವೀರ
ವೇಗದಿಂ ಅಸುರರ ಬಡಿದು ಹೆಡೆ ಮುರಿದಿಕ್ಕಿದಾ ಶೂರ
ಯೋಗದಿಂ ಹಾರಿ ಸಂಜೀವಿನಿಗಿರಿ ತಂದ ಘೋರ
ಸಾಗರಗಂಭೀರ ಧೀರ ಹನುಮ ಏಳು ಬೆಳಗಾಯಿತು ॥ 20

ದಾಸ ಶ್ರೇಷ್ಠನೆ ವಾಸುದೇವನ ಪ್ರಿಯನೆ ರಕ್ಷಿಸನವರತ
ಲೇಸ ಮಾಡುನೀ ಸೀತಾರಾಮಲಕ್ಷ್ಮಣರ ಸಹಿತ
ಭಾಸುರ ಮೂರ್ತಿ ವೀರ ಪ್ರತಾಪಿ ಮಂಗಳವೆಸಗು ಸತತ
ಕೋಸಲದರಸನ ಕಣ್ಮಣಿ ಹನುಮ ಏಳು ಬೆಳಗಾಯಿತು ॥ 21

ಗರುಡ ಗಂಧರ್ವ ಯಕ್ಷಕಿನ್ನರ ಕಿಂಪುರುಷರು ಕೂಡಿ
ಕರುಣಾಮಯನ ಮಹಿಮೆಗಳ ಬಣ್ಣಿಪರು ಕೊಂಡಾಡಿ
ಹರುಷದಿಂ ಸುರರು ಕರಗಳ ಮುಗಿದು ಪೊಗಳುವರು ಹಾಡಿ
ಕರುನಾಡ ಕಲಿವೀರ ಹನುಮ ಏಳು ಬೆಳಗಾಯಿತು ॥ 22

ನಿನ್ನ ಹೆಗಲ ಸೇರಲು ರಾಮಲಕ್ಷ್ಮಣರು ಕೂಡಿ ಕಾದಿಹರು
ನಿನ್ನ ದರುಶನವ ಬಯಸಿ ಸುರರು ಬಂದು ನಿಂದಿಹರು
ಚೆನ್ನಮೂರುತಿ ಬಾರೋ ಎಂದು ಭಕ್ತರೆಲ್ಲರು ಕರೆಯುತಿಹರು
ಧೀರ ಗಂಭೀರಸಾರ ಹನುಮ ಏಳು ಬೆಳಗಾಯಿತು ॥ 23



ಲವಕುಶರೊಡಗೂಡಿ ಮಾತೆ ಸೀತಾದೇವಿ ಬಂದಿಹಳು
ನವ ಫಲ ಪುಷ್ಪಗಳನ್ನಿತ್ತು ಆಶೀರ್ವದಿಸೆ ನಿಂದಿಹಳು
ಕೈವಲ್ಯ ಮೂರುತಿ ತಂದೆ ಹನುಮ ಎಂದು ಕರೆದಿಹಳು
ಪವನಾತ್ಮಜ ಮುದ್ದು ಹನುಮ ಏಳು ಬೆಳಗಾಯಿತು ॥ 24

ಕಪಿಗಿರಿಯ ಶೃಂಗದಲಿ ನಿಂತೆ ಕದನಗಲಿ ನೀನಾಗಿ
ವರ ರಾಮಾಚಲದಿ ನಿಂತೆ ಕಾರುಣ್ಯ ನಿಧಿಯು ನೀನಾಗಿ
ನರರ ಹೃದಯ ಬೀಡಿನಲಿ ನಿಂದೆ ಕೈವಲ್ಯಪತಿಯಾಗಿ
ಹರಿಭಕ್ತ ದಾಸರಹಳ್ಳಿ ಹನುಮ ಏಳು ಬೆಳಗಾಯಿತು ॥ 25

ಪಂಪಾ ಸರೋವರದಿ ಮಿಂದು ಪಾವನನಾಗಿ ಕುಳಿತೆ
ಶ್ರೀಪತಿಯ ನಾಮ ಪಠಿಸುತ್ತ ಇಹ ಸುಖವ ಮರೆತೆ
ಕೃಪಾನಿಧಿ ನಿನ್ನಿಂ ಉಕ್ಕಿ ಹರಿದುದು ಭಕ್ತಿ ಒರತೆ
ಹಂಪೆಯರಸ ಪ್ರಿಯ ಹನುಮ ಏಳು ಬೆಳಗಾಯಿತು ॥ 26

ಕವಿದಿರುವ ತಮವನ್ನು ದೂಡಲು ಕರುಣೆಯಿಂ ಬಾರೊ
ಭವ ಸಾಗರವ ದಾಂಟಿಸುವ ಅಂಬಿಗನಾಗಿ ನೀ ಬಾರೋ
ಪವನಾತ್ಮಜನೆ ವಿಶ್ವಕಲ್ಯಾಣ ಕೋರುತ ಗುರುವಾಗಿ ಬಾರೋ
ಭವರೋಗ ವೈದ್ಯ ಜೇಬಿ ಹನುಮ ಏಳು ಬೆಳಗಾಯಿತು॥ 27

ಉದಯ ಕಾಲದಿ ಎದ್ದು ಸುಪ್ರಭಾತವ ಪಾಡುತಿಹೆನೋ ತಂದೆ
ಸದಮಲನ ರಮ್ಯ ದರುಶನವ ಕಾಣಲು ಬಂದೆ ತಂದೆ
ವದನಾರವಿಂದವನು ತೋರೋ ತುಲಸಿ ಮಾಲೆಯ ಪಿಡಿದು
ಗದುಗಿನ ಹರಿಭಕ್ತ ಹನುಮ ಏಳು ಬೆಳಗಾಯಿತು ॥ 28

ಶಂಖನಾದದ ಜೊತೆಗೆ ತಾಳ ವಾದ್ಯವು ಮೊಳಗುತಿಹುದಯ್ಯ
ಮುಖಾವಲೋಕನ ಗೈಯಲು ಮನವು ತವಕಿಸುತಿಹುದಯ್ಯ
ಸುಖ–ದುಃಖಗಳ ಮರೆತು ನಿನ್ನ ಧ್ಯಾನದಿ ಮುಳುಗಿಹೆನಯ್ಯ
ಭಕ್ತವತ್ಸಲನೆ 'ಕವಿತಾಕೃಷ್ಣ'ನ ಮನದರಸನೆ
ಏಳು ಬೆಳಗಾಯಿತು ॥ 29

ಎದೆಯನ್ನು ಬಗೆದು ಹೃದಯದಿ ರಾಮನನು ತೋರಿದೆ
ಸುಧಾಮೃತವನು ಭಕ್ತಕೋಟಿಗೆ ಉಣಿಸುತಾ ಬಂದೆ
ವೇದೋಪನಿಷತ್‌ಗಳ ಪರಿಪರಿಯಲಿ ಓದಿ ನಲಿದೆ
ವಿಧಾತ ಬಿಜ್ಜಾವರದ ಹನುಮ ಏಳು ಬೆಳಗಾಯಿತು ॥ 30

ಕನಕ ಪುರಂದರ ವಿಜಯದಾಸರು ಬಂದು ನಿಂದಿಹರು
ಮನಮನಗಳಲ್ಲಿ ನಿನ್ನ ತುಂಬಿ ಕೀರ್ತನೆಗಳ ಪಾಡುತಿಹರು
ಮನು–ಮುನಿಗಣ ಯಕ್ಷ ಗಂಧರ್ವರು ಕುಣಿದು ಕುಂಬಿಡು
ತಿಹರು
ಚಿನ್ಮಯ ಶ್ರೀ ಹಾಲದೊಡ್ಡೇರಿ ಹನುಮ ಏಳು ಬೆಳಗಾಯಿತು
31

ತಂದೆ ನಾ ಪುನೀತನಾದೆನೋ ನಿನ್ನ ನಾಮಾಮೃತವ ಪಾಡಿ
ಬಂದನ್ನೆ ಉದ್ಧರಿಸೊ ಪುಣ್ಯ ಪುರುಷ ಕಾರುಣ್ಯವನು ಕೂಡಿ
ಸುಂದರಾಂಗನೆ ವ್ಯಾಕರಣ ಕೋವಿದನೆ ರಕ್ಷಿಸೊ ಸದ್ಗತಿ
ನೀಡಿ
ವಂದಿಸುವ ಕವಿತಾಕೃಷ್ಣನ ಪ್ರೀತನೆ ಏಳು ಬೆಳಗಾಯಿತು ॥



# ಯುವವಾಣಿ

ಮಹಾಕವಿಗಳು ಯಾವ ದೇಶಕ್ಕೂ, ಯಾವ ಒಂದು ಕಾಲಕ್ಕೂ, ಧರ್ಮಕ್ಕೂ ಸಂಬಂಧಪಟ್ಟವರಲ್ಲ. ಅವರು ಇಡೀ ಮಾನವ ಕುಲಕ್ಕೆ ಸಂಬಂಧಿಸಿದವರು. ಅವರ ಗ್ರಂಥಗಳು ಜಗತ್ತಿಗೆ ದಾರಿದೀಪಗಳು. ಭಾಷೆಗಳು ಬೇರೆಯಾಗಿರಬಹುದಾದರೂ ಅವರ ಗ್ರಂಥಗಳಲ್ಲಿ ಲೋಕೋತ್ತರವಾದ ಭಾವನೆಗಳು ಒಂದೇ ಧಾಟಿಯಲ್ಲಿ ಹರಿದಿರುತ್ತವೆ. ಕವಿ ಕಾವ್ಯವನ್ನೇಕೆ ಬರೆಯುತ್ತಾನೆಂಬ ಪ್ರಶ್ನೆಗೆ ಯಾರೇನಾದರೂ ಉತ್ತರ ಹೇಳಲಿ – ಒಂದು ಮಾತು ಮಾತ್ರ ಸತ್ಯ. ಆತ ಕಾವ್ಯ ಬರೆಯುವುದು ದೈವೀಪ್ರೇರಣೆಯಿಂದ. ಲೋಕಕಲ್ಯಾಣವೇ ಮಹಾಕವಿಗಳ ಗುರಿ. ಲೋಕದ ಬಾಳನ್ನು ಅಮಂಗಳದಿಂದ ಮಂಗಳದ ಕಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ ತಿರುಗಿಸುವ ಶಕ್ತಿಯುಳ್ಳ ಕಾವ್ಯಗಳು ಯಾವುದೇ ಭಾಷೆಯಲ್ಲಿರಲಿ, ಅವು ಪರಮ ಪೂಜ್ಯವಾಗಿರುತ್ತವೆ. ಇಂತಹ ಕೃತಿಗಳನ್ನು ಕುರಿತು ಯೋಚಿಸುವಾಗ ಕಾವ್ಯಂ "ಕಲ್ಪಾಂತರ ಸ್ಥಾಯೀ" – ಎಂಬ ಮಾತಿನ ಮಹತ್ವ ಅರ್ಥವಾಗುತ್ತದೆ. ವಾಕ್ಯಂ ರಸಾತ್ಮಕಂ ಕಾವ್ಯಂ–ಎಂಬ ಸಿದ್ಧಾಂತವನ್ನು ಒಪ್ಪುವುದಾದರೆ ಸುಭಾಷಿತಗಳನ್ನು ಕಾವ್ಯವೆನ್ನಲಡ್ಡಿ ಇಲ್ಲ.

ಸುಭಾಷಿತಗಳ ಕ್ಷೇತ್ರ ಬಹುವ್ಯಾಪಕ, ಅದರ ವ್ಯಾಪ್ತಿಗೆ ಬಾರದ ಸನ್ನಿವೇಶವೇ ಇಲ್ಲ. –ಅವರ ಕಬಂಧ ಬಾಹುಗಳಿಗೆ ಸಿಕ್ಕದ ವಸ್ತುವೇ ಇಲ್ಲ. ಹಾಸ್ಯ, ದೇವತಾಸ್ತೋತ್ರ, ಮಧುರವ್ಯಂಗ್ಯ, ಮಾನವರ ವಿವಿಧ ಸ್ವಭಾವಗಳು, ಕಟುಕಿ ಮಾತು–ನೀತಿಧರ್ಮ ನಿರೂಪಣೆ, ವ್ಯವಹಾರ ಕೌಶಲ, ನವರಸಗಳು, ಪ್ರಕೃತಿವರ್ಣನೆ, ಅನ್ಯೋಕ್ತಿ, ಸ್ತುತಿ, ನಿಂದೆ, ಗಾದೆ– ಹೀಗೆ ನೂರಾರು ಅಂಶಗಳು ಅಡಗಿರುತ್ತವೆ, ಸುಭಾಷಿತಗರ್ಭದಲ್ಲಿ. ಸುಭಾಷಿತಗಳ ಅಧ್ಯಯನವೇ ಒಂದು ವಿದ್ಯಾಭ್ಯಾಸ, ಒಂದು ದೊಡ್ಡ ಅನುಭವ, ಏಕೆಂದರೆ ಅದೊಂದು ವಿಶ್ವಕೋಶ.

ಸುಭಾಷಿತ ರತ್ನ ಭಾಂಡಾಗಾರ, ಸಾಯಣಸುಭಾಷಿತ ಸುಧಾನಿಧಿ–ವಲ್ಲಭದೇವ ಕೃತ ಸುಭಾಷಿತಾವಳಿ ... ಇತ್ಯಾದಿ ಅನೇಕ ಗ್ರಂಥಗಳಿವೆ. ಸುತ್ತುಕಟ್ಟಿನ ಕಡೆ ಒಂದು ಮುತ್ತುಕಟ್ಟು ಎಂಬಂತೆ ನೂರು ಮಾತಾಡುವುದೂ ಒಂದೆ ಸಂದರ್ಭಾನುಸಾರವಾಗಿ ಒಂದು ಸುಭಾಷಿತವನ್ನು ಉದಾಹರಿಸುವುದೂ ಒಂದೆ. ಬಹುಶಃ ನೂರು ಮಾತಿಗಿಂತಲೂ ಒಂದು ಸುಭಾಷಿತದ ಪ್ರಭಾವ ಪರಿಣಾಮ ಹೆಚ್ಚು!! ಸುಭಾಷಿತ ವಾಕ್ಯಗಳಲ್ಲಿ ಕಾವ್ಯಗುಣ ತುಂಬಿರುತ್ತದೆ–ಸಾವಿರಾರು ಸುಭಾಷಿತಗಳನ್ನು ಪುಂಖಾನುಪುಂಖವಾಗಿ ಉದಾಹರಿಸುತ್ತಿದ್ದ ವಿದ್ವಾಂಸರಿದ್ದರು. ಸಾವಿರಾರು ಸುಭಾಷಿತ ವಾಕ್ಯಗಳು ನಾಲಿಗೆಯಲ್ಲಿ ನಲಿದಾಡುತ್ತಿದ್ದ ಸಾಹಿತ್ಯ

# ಸುಭಾಷಿತ ಸ್ವಾರಸ್ಯ

ರಸಿಕರಿದ್ದರು. ಅಂತ್ಯಾಕ್ಷರೀ ಸ್ಪರ್ಧೆಗಳಲ್ಲಿ ಲೀಲಾಜಾಲವಾಗಿ ತೇರ್ಗಡೆಯಾಗುತ್ತಿದ್ದ ಉತ್ಸಾಹಿಗಳಿದ್ದರು–ಇದೆಲ್ಲ ಭೂತಕಾಲದ ವೈಭವ!! ಸುಭಾಷಿತಗಳನ್ನು ಶಾಸ್ತ್ರವಾಕ್ಯಗಳೆನ್ನಬೇಕೆ? ಕಾವ್ಯವೆನ್ನಬೇಕೆ? ಸತ್ಯಾನ್ವೇಷಣೇ ಶಾಸ್ತ್ರಂ ಹೃತೋಷಿಣೀ ಕಾವ್ಯಂ!!

ವಿನಯೇನ ವಿನಾ ಕಾ ಶ್ರೀ
ಕಾ ನಿಶಾ ಶಶಿನಾ ವಿನಾ ।
ರಹಿತಾ ಸತ್ಕವಿತ್ವೇನ
ಕೀದೃಶೀ ವಾಗ್ವಿದಗ್ಧತಾ

ಇದು ಲಾಕ್ಷಣಿಕ ಭಾಮಹನ ಅಭಿಪ್ರಾಯ. ಆದ್ದರಿಂದ ಸುಭಾಷಿತವು ವಾಗ್ವಿದಗ್ಧತೆಯಿಂದ ಕೂಡಿದ ಸತ್ಕವಿತ್ವ ಅಥವ ಸತ್ಕವಿತ್ವಕಳಾಯುಕ್ತ ವಾಗ್ವಿದಗ್ಧತೆ!!

ಈಗ ಕೆಲವು ಸುಭಾಷಿತಗಳ ಸೊಗಸನ್ನು ನೋಡೋಣ –

ಒಂದುದಿನ ಬ್ರಹ್ಮದೇವನಿಗೆ ತನ್ನ ವಾಹನವಾದ ಹಂಸದ ಮೇಲೆ ತುಂಬ ಸಿಟ್ಟು ಬಂತಂತೆ. ಯಜಮಾನರು ಹೇಳಿದ ಸಮಯಕ್ಕೆ ಸರಿಯಾಗಿ ವಾಹನ ಸಿದ್ಧವಾಗಿ ಬರಲಿಲ್ಲವೇನೋ? ಹಂಸ ವಿಧಾತನ ಕೋಪಕ್ಕೆ ಬೆದರದೆ ಆತ್ಮಾಭಿಮಾನದಿಂದ ಹೇಳಿತಂತೆ –

ಅಂಭೋಜಿನೀವನ
ನಿವಾಸ ವಿಲಾಸಮೇವ
ಹಂಸಸ್ಯ ಹಂತ ನಿತರಾಂ
ಕುಪಿತೋ ವಿಧಾತಾ ।
ನ ತ್ವಸ್ಯ ದುಗ್ಧ ಜಲ ಭೇದ
ವಿಧೌ ಪ್ರಸಿದ್ಧಾಂ
ವೈದಗ್ಧ್ಯ ಕೀರ್ತಿಮಪಹರ್ತು
ಮಸೌ ಸಮರ್ಥಃ"

ನನ್ನ ಕಮಲವನದಲ್ಲಿ – ರಮಣೀಯ ಕಾಸಾರಗಳಲ್ಲಿ – ವಿಹರಿಸಕೂಡದೆಂದು ಬ್ರಹ್ಮದೇವ ಆಜ್ಞೆಮಾಡಬಹುದು. ಆದರೆ ಅವರ ನೀರಕ್ಷೀರ ವಿಭಜನಾ ಸಾಮರ್ಥ್ಯವನ್ನು ಆತ ಕಸಿದುಕೊಳ್ಳಲಾರನಲ್ಲವೆ?

ಪ್ರತಿಯೊಬ್ಬ ವ್ಯಕ್ತಿಗೂ ತನ್ನದೇ ಆದ ಕೆಲವು ವಿಶೇಷಯೋಗ್ಯತೆಗಳಿರುತ್ತವೆ – ಪ್ರತಿಭಾ ಸಾಮರ್ಥ್ಯವಿರುತ್ತದೆ – ವಿಚಾರಧಾರೆ ಇರುತ್ತದೆ. ಅದನ್ನುಯಾರೂ ಕಸಿದುಕೊಳ್ಳಲು ಸಾಧ್ಯವಿಲ್ಲ.

ಈ ಸುಭಾಷಿತದಲ್ಲಿ ಒಬ್ಬ ಭಕ್ತ ಭಗವಂತನನ್ನು ಸ್ತೋತ್ರಮಾಡುವ ವೈಖರಿ ಇದೆ –

ಆದಿಮಧ್ಯಾಂತ ರಹಿತಂ
ದಿಶಾ ಹೀನಂ ಪುರಾತನಂ
ಅದ್ವಿತೀಯ ಮಹಂ ವನ್ದೇ
ಮದ್ವಸ್ತ್ರ ಸದೃಶಂ ಹರಿಮ್

**ವಿದ್ವಾನ್ ಬ. ನ. ಗುಂಡೂರಾವ್**

ಈ ಭಕ್ತ ತನ್ನ ವಸ್ತ್ರಕ್ಕೂ ಶ್ರೀಹರಿಗೂ ಸಾಮ್ಯ ಕಲ್ಪಿಸಿದ್ದಾನೆ. ನನ್ನವಸ್ತ್ರ ಆದಿ ಮಧ್ಯಾಂತರಹಿತ-ಅಂಚು ಸೆರಗು ಯಾವುದೂ ಇಲ್ಲದ ಜೀರ್ಣವಸ್ತ್ರ. ನೀನೂ ಆದಿ ಮಧ್ಯಾಂತ ರಹಿತ. ನನ್ನ ವಸ್ತ್ರವು ಪುರಾತನ-ನೀನೂ ಪುರಾತನ. ನನ್ನಲ್ಲಿ ಈ ವಸ್ತ್ರ ಬಿಟ್ಟರೆ ಬೇರೊಂದು ಗತಿ ಇಲ್ಲ. ದ್ವಿತೀಯ ವಸ್ತ್ರ ಇಲ್ಲದ್ದರಿಂದ ಇದು ಅದ್ವಿತೀಯ ವಸ್ತ್ರ. ಶ್ರೀಹರಿಯೂ ಅದ್ವಿತೀಯ. ಹರಿಗೂ ವಸ್ತ್ರಕ್ಕೂ ಎಂತಹ ಸಾದೃಶ್ಯ !!

ಅತ್ತೆ ಸೊಸೆಯರ ಜಗಳ ಲೋಕದಲ್ಲಿ ಸಾಮಾನ್ಯ ಕಥೆ. ಅತ್ತೆ ಸೊಸೆ ಇಬ್ಬರೂ ಒಂದು ಮನೆಯಲ್ಲಿ ಬಾಳುತ್ತಿರುವ ಪ್ರತಿ ಮನೆಯ ಕಥೆ. ಇಬ್ಬರೂ ಒಂದೇ ಕಡೆ ಸಂತೋಷವಾಗಿರುವುದು ಅಸಂಭವ. ಲಕ್ಷ್ಮಿ ಸರಸ್ವತಿಯರು ಅತ್ತೆ ಸೊಸೆಯರೇ. ಅದಕ್ಕೇ ಅವರಿಬ್ಬರೂ ಒಂದು ಕಡೆ ಇರುವುದು ಅಪರೂಪ. ಒಬ್ಬ ಕವಿ ಹೇಳುತ್ತಾನೆ.

ಕುಟಿಲಾ ಲಕ್ಷ್ಮೀರ್ಯತ್ರ ಭವತಿ
ನ ಸರಸ್ವತೀ ವಸತಿ ತತ್ರ
ಪ್ರಾಯಃ ಶ್ವಶ್ರೂ ಸ್ನುಷಯೋರ್ನ
ದೃಶ್ಯತೇ ಸೌಹೃದಂ ಲೋಕೇ

ಬಹುದೊಡ್ಡ ವ್ಯಕ್ತಿಯಾದರೂ ಕೆಲವು ಸಂದರ್ಭಗಳಲ್ಲಿ ನೀಚರಿಗೆ, ಕ್ಷುದ್ರಜೀವಿಗೆ ಕೈಮುಗಿಯಬೇಕಾಗಿ ಬರುತ್ತದೆ. ಪ್ರಥಮ ಪೂಜ್ಯನಾದ-ಸಿದ್ಧಿ ಪ್ರದಾಯಕನಾದ ಗಣೇಶನ ಯೋಗ್ಯತೆಯೇನು !! ಕೆಲಸಕ್ಕೆ ಬಾರದ ಬೆಕ್ಕಿನ ಯೋಗ್ಯತೆಯೇನು !! ಆದರೆ ಗಣೇಶನೂ ಸಹ ಬೆಕ್ಕಿಗೆ ಕೈಮುಗಿಯಬೇಕಾಗಿ ಬಂತಂತೆ, ತನ್ನ ವಾಹನ ಸುರಕ್ಷಿತವಾಗಿ ರಲೆಂದು !!

ಗಣೇಶಃ ಸ್ತೌತಿ ಮಾರ್ಜಾಲಂ
ಸ್ವವಾಹಸ್ಯಾಭಿರಕ್ಷಣೇ
ಮಹಾನಪಿ ಪ್ರಸಂಗೇನ
ನೀಚಂ ಸೇವಿತು ಮಿಚ್ಛತಿ ॥

ಎಂತಹ ಮಿತ್ರರಿದ್ದರೇನು? ಎಂತಹ ಬಂಧು ಬಳಗವಿದ್ದರೇನು? ವ್ಯಕ್ತಿ ಹಣೆ ಬರಹ-ಕರ್ಮ ಅತ್ಯಂತ ಪ್ರಬಲ ತತ್ತ್ವಗಳು, ಅದರಂತೆ ಅವನ ಬಾಳು. ನಗಾಧಿರಾಜನೇ ಮಾವ, ಕುಬೇರನೇ ಆಪ್ತಮಿತ್ರ- ಸಕಲೇಷ್ಟ ಪ್ರದಾಯಕನಾದ ವಿಘ್ನರಾಜನೇ ಮಗ !! ಆದರೇನಂತೆ-ಶಿವನ ಬಾಳು ಎಷ್ಟು ಶೋಚನೀಯ !! ಈ ಧ್ರುವ ಸತ್ಯವನ್ನು ಕವಿ ಹೇಳುವ ಸೊಗಸು ಹೀಗಿದೆ.

ಸ್ವಯಂ ಮಹೇಶಃ
ಶ್ವಶುರೋ ನಗೇಶಃ
ಸಖಾ ಧನೇಶಃ
ತನಯೋ ಗಣೇಶಃ
ತಥಾಪಿ ಭಿಕ್ಷಾಟನಮೇವ ಶಂಭೋ
ರ್ಬಲೀಯಸೀ ಕೇವಲ ಮೀಶ್ವರೇಚ್ಛಾ

ಬೇಡಿ ಬರುವವರಿಗೆ ಯಾಚಕರೆಂದು ಹೆಸರು. ಈ ಜನ ಪ್ರಬಲವಾಗಿ ಬಳಸುವ ಅಸ್ತ್ರ ಹೊಗಳಿಕೆ !! ಆದರೆ ಒಬ್ಬ ಯಾಚಕ ದೊರೆಯ ಮುಂದೆ ನಿಂತು ಹೇಳುತ್ತಾನೆ; 'ನಿನ್ನನ್ನು ಸರ್ವಜ್ಞನೆಂದು ಹೊಗಳುವವರಿಗೆ ಬುದ್ಧಿ ಇಲ್ಲ. ಏಕೆಂದರೆ ನೀನು ಸರ್ವಜ್ಞನಲ್ಲವೇ ಅಲ್ಲ, ಒಂದು ವಿಚಾರ ತಿಳಿಯದೇ ಇದ್ದರೂ ಸರ್ವಜ್ಞತ್ವಕ್ಕೆ ಲೋಪ ಬರುತ್ತದೆ. ಹೀಗಿರುವಾಗ ನೀನು ಹೇಗೆ ತಾನೆ ಸರ್ವಜ್ಞನಾಗಬಲ್ಲೆ ?'

ಸರ್ವಜ್ಞ ಇತಿ ಲೋಕೇಯಂ
ಭವಂತಂ ಭಾಷಸೇ ಮೃಷಾ
ಪದಮೇಕಂ ನ ಜಾನಾಸಿ
ವಕ್ತುಂ ನಾಸ್ತೀತಿ ಯಾಚಕೇ

ಬೇಡಿ ಬಂದವರಿಗೆ-ಏನೂ ಇಲ್ಲ ಹೋಗು -ಎಂದು ಹೇಳುವ ಒಂದು ವಿಚಾರ ಆ ರಾಜನಿಗೆ ತಿಳಿಯದಂತೆ !! ಆದ್ದರಿಂದ ಆತ ಸರ್ವಜ್ಞನಲ್ಲವಂತೆ!! ಈ ಚಮತ್ಕಾರದ ಮಾತಿಗೆ ಆ ಯಾಚಕ ಮಹಾರಾಜನಿಂದ ಭಾರೀ ಬಹುಮಾನವನ್ನು ಪಡೆದೇ ಇರಬೇಕು !!

ಈಗ ನಮ್ಮ ದೇಶದಲ್ಲಿ ಆಳಸರಾಗಿ ಯಾರೇ ಇರಲಿ- ಕೆಲವು ಪದಾರ್ಥಗಳು ಸಿಕ್ಕುವುದಂತೂ ದುರ್ಲಭವಾಗಿದೆಯೆಂಬ ಮಾತು ಸತ್ಯ. ಆದರೆ ಸಕಲ ಸಂಪದ್ಭರಿತವಾಗಿದ್ದ ಕಾಲದಲ್ಲಿ - ಭೋಜನರೇಂದ್ರನ ಕಾಲದಲ್ಲೂ - ಅಭಾವವಿತ್ತಂತೆ !! ಯಾವ ವಸ್ತುಗಳಿಗೆ ? ಕವಿ ಹೇಳುತ್ತಾನೆ.

ಅಸ್ಯ ಶ್ರೀ ಭೋಜರಾಜಸ್ಯ
ದ್ವಯಮೇವ ಸುದುರ್ಲಭಂ
ಶತ್ರೂಣಾಂ ಶೃಂಖಲೈರ್ಲೋಹಂ
ತಾಮ್ರಂ ಶಾಸನ ಪತ್ರಕೈಃ

ದತ್ತಿ-ದಾನ-ಧರ್ಮ-ಜಹಗೀರು ಕೊಡುತ್ತ ತಾಮ್ರಶಾಸನಗಳನ್ನು ಬರೆಸಿ ಬರೆಸಿ ತಾಮ್ರಕ್ಕೆ ಅಭಾವ ಬಂತಂತೆ!! ಶತ್ರುರಾಜರಿಗೆ ಕೈಕೋಳಗಳನ್ನು ತೊಡಿಸಿ ತೊಡಿಸಿ ಕಬ್ಬಿಣಕ್ಕೆ ಅಭಾವ ಬಂತಂತೆ. ಶೌರ್ಯಕ್ಕೂ ದಾನಶೀಲತೆಗೂ ಎಂತಹ ರಂಗೇರಿಸಿದ್ದಾನೆ ರಸಿಕಕವಿ !!

ಭಿಕ್ಷಾಟನೆ ತುಂಬ ಅವಮಾನದ ಕೆಲಸ ಅದಕ್ಕಿಂತಲೂ ಸ್ವಂತ ಕೃಷಿಮಾಡಿ ತಿಂದು ಬಾಳುವುದು ಮರ್ಯಾದೆ. ಆದರೆ ಕೃಷಿ ಸುಮ್ಮನೆ ಆದೀತೆ? ಭೂಮಿ-ನೇಗಿಲು-ಎತ್ತು - ಬಿತ್ತನೆಬೀಜ- ಏನೇನೋ ಪರಿಕರಗಳು ಬೇಕು. ಇವೆಲ್ಲ ಅಣಿ ಮಾಡಿಕೊಳ್ಳುವುದು ಸಮಸ್ಯೆಯಲ್ಲವೇ ? ಇದಕ್ಕೆ ಜಗನ್ಮಾತೆ ಗೌರೀ ದೇವಿ ಹೀಗೆ ಪರಿಹಾರ ಸೂಚಿಸಿದ್ದಾಳೆ -

ರಾಮಾ ದ್ಯಾಚಯ ಮೇದಿನೀಂ
ಧನಪತೇ ರ್ಬೀಜಂ
ಬಲಾ ಲ್ಲಾಂಗಲಂ
ಪ್ರೇತೇಶಾ ನ್ಮಹಿಷಂ
ತವಾಸ್ತಿ ವೃಷಭಃ
ಫಾಲಂ ತ್ರಿಶೂಲಂ ತವ
ಶಕ್ತಾಹಂ ತವ ಚಾನ್ನದಾನಕರಣೇ
ಸ್ಕಂದೋಸ್ತಿ ಗೋರಕ್ಷಣೇ
ಖಿನ್ನಾಹಂ ಹರ ಭಿಕ್ಷಯಾ
ಕುರು ಕೃಷಿಂ
ಗೌರೀವಚಃ ಪಾತು ವಃ

ಕ್ಷತ್ರಿಯರನ್ನೆಲ್ಲ ಸದೆ ಬಡಿದು ಭೂಮಂಡಲವೆಲ್ಲ ವಶಪಡಿಸಿಕೊಂಡಿರುವ ಪರಶುರಾಮನಿಂದ ಭೂಮಿ ಸಂಪಾದಿಸು. ಕುಬೇರನಿಂದ ಖರ್ಚಿಗೆ ಕಾಸು - ಬಿತ್ತನೆ ಬೀಜ ತೆಗೆದುಕೊ. ಬಲರಾಮನ ನೇಗಿಲನ್ನು ಕೇಳಿ ತೆಗೆದುಕೊ. ಯಮನ ಕೋಣವನ್ನು ಕೇಳಿ ತೆಗೆದುಕೊ, ಅದರ ಜತೆಗೆ ನೇಗಿಲಗೆ ಕಟ್ಟಲು ನಿನ್ನ ಬಳಿ ಹೇಗೂ ಒಂದು ಎತ್ತು ಇದ್ದೇ

ಇದೆ. ನೇಗಿಲಕುಳನಾಗಿ ನಿನ್ನ ತ್ರಿಶೂಲವನ್ನೇ ಬಳಸಿಕೊ. ನಿನಗೆ ಆಹಾರ ಒದಗಿಸಲು ನಾಸಿದ್ದೇನೆ. ಎತ್ತು ಎಮ್ಮೆಗಳನ್ನು ಮೇಯಿಸಲು ಮಗ ಸ್ಕಂದ ಇದ್ದಾನೆ. ಹಾಗೆ ಮಾಡುವುದು ಬಿಟ್ಟು ಭಿಕ್ಷೆ ಬೇಡುವುದು ಸೂಕ್ತವಲ್ಲ – ಎಂದು ಸಲಹೆ ಮಾಡಿದ ಗೌರಿಯ ವಚನ ನಿಮ್ಮನ್ನು ಕಾಪಾಡಲಿ. ಆಶೀರ್ವಾದದ ಸೊಗಸು – ಚಮತ್ಕಾರದ ಜತೆಗೆ ಕುರು ಕೃಷಿಂ–ಎಂಬ ಸಂದೇಶ ಈ ಸುಭಾಷಿತದ ಜೀವಾಳ.

ಅಕ್ಕಸಾಲಿಗನಿಗೆ ಬಂಗಾರ ಕೊಟ್ಟು – ಯಾವ ಬಗೆಯ ಹೂ ಬೇಕಾದರೂ ಕೇಳಿ– ಆತ ಸೊಗಸಾಗಿ ಮಾಡಿ ಕೊಡುತ್ತಾನೆ. ಏಕೆಂದರೆ ಆತ ಕುಶಲಕರ್ಮಿ, ಆದರೆ ಆ ಹೂವಿನಲ್ಲಿ ಸೌರಭವನ್ನಿಡಬಲ್ಲನೇ ?

ಸೌವರ್ಣಾನಿ ಸುಪುಷ್ಪಾಣಿ
ನಿರ್ಮಾತುಂ ಸಂತಿ ಶಿಲ್ಪಿನಃ
ತತ್ರ ಸೌರಭ ನಿರ್ಮಾಣೇ
ಚತುರ ಶ್ಚತುರಾನನಃ

ಪುಷ್ಪಾಂತರ್ಗತ ಸೌರಭ ಬ್ರಹ್ಮಸೃಷ್ಟಿಯ ಒಂದು ರಮಣೀಯತೆ!!

ಅನೇಕ ಸಂದರ್ಭಗಳಲ್ಲಿ ಹೀಗಾಗುವುದುಂಟು – ಉತ್ಸಾಹಶಾಲಿಗಳು ಸಭೆ ಏರ್ಪಡಿಸಿರುತ್ತಾರೆ. ತಳಿರು ತೋರಣ ಕಟ್ಟಿ– ಜಂಖಾನೆ ಹಾಸಿ ಎಲ್ಲ ಏರ್ಪಾಟುಮಾಡಿರುತ್ತಾರೆ. ಭಾಷಣಕಾರರು ತುಂಬ ವಿದ್ವಾಂಸರು. ಅವರೂ ಬಂದಿರುತ್ತಾರೆ, ಆದರೆ ಭಾಷಣ ಕೇಳಲು ಜನರೇ ಇಲ್ಲ!! ಇಂತಹ ಸ್ಥಿತಿಗೆ ಸಿಕ್ಕಿದ ಒಬ್ಬಾತ ಹೀಗೆ ಹೇಳಿದ್ದಾನೆ.

ಕಿಂ ಕರಿಷ್ಯತಿ ವಕ್ತಾರಃ
ಶ್ರೋತಾ ಯತ್ರ ನ ವಿದ್ಯತೇ
ನಗ್ನ ಕ್ಷಪಣಕೇ ದೇಶೇ
ರಜಕಃ ಕಿಂ ಕರಿಷ್ಯತಿ?

ದಿಗಂಬರ ಜೈನ ಸನ್ಯಾಸಿಗಳಿರುವಲ್ಲಿ ಅಗಸರವನ ಅಗತ್ಯವೇನುಂಟು. ಕೇಳುವವರಿಲ್ಲದಾಗ ಹೇಳುವವನಿಗೇನು ಕೆಲಸ ?? ಮಾನವ ಬದುಕಿರುವುದೇ ಆಸೆಯಿಂದ, ಇಂದಲ್ಲ ನಾಳೆ ಒಳಿತಾದೀತೆಂಬ ಭರವಸೆಯಿಂದ. ಈ ಆಶಾವಾದವೇ ಬಾಳಿನ ಪಯಣಕ್ಕೆ ಅತಿಮುಖ್ಯವಾದ ಬುತ್ತಿಗಂಟು. ಇದಕ್ಕೆ ಒಬ್ಬ ಕವಿ ಮಹಾಭಾರತವನ್ನು ಉದಾಹರಿಸುತ್ತಾನೆ

ಹತೇ ಭೀಷ್ಮೇ ಹತೇ ದ್ರೋಣೇ
ಕರ್ಣೇ ಚ ನಿಧನಂ ಗತೇ
ಆಶಾ ಬಲವತೀ ರಾಜನ್
ಶಲ್ಯೋ ಜೇಷ್ಯತಿ ಪಾಂಡವಾನ್

ಅಪ್ರತಿಮ ಪೌರುಷ ಸಂಪನ್ನರಾದ ಭೀಷ್ಮರು ಕೆಳಗುರುಳಿದರು, ಶಸ್ತ್ರಾಸ್ತ್ರ ಪ್ರಯೋಗ ಪರಿಣತಮತಿಯಾದ ದ್ರೋಣ ಹತನಾದ, ಆಪ್ತಪುತ್ರನೂ ರವಿಸಮಾನ ತೇಜೋರಾಶಿಯೂ ಆದ ಕರ್ಣ ಹತನಾದ, ಘಟಾನುಘಟಿಗಳು ಮಣ್ಣು ಪಾಲಾದರೂ ಕೌರವೇಶ್ವರನಿಗಿನ್ನೂ ಆಸೆ ಇತ್ತು – ಶಲ್ಯರಾಜ ಯುದ್ಧದಲ್ಲಿ ಪಾಂಡವರನ್ನು ಸೋಲಿಸಿ ತನಗೆ ಕೀರ್ತಿಕಳಶವಿಡುತ್ತಾನೆಂದು!!

ಒಂದೇ ವಸ್ತು ಒಬ್ಬರಿಗನುಕೂಲ, ಇನ್ನೊಬ್ಬರಿಗೆ ಪ್ರತಿಕೂಲವಾಗಿ ಪರಿಣಮಿಸುವುದುಂಟು. ಅದೇಕೆ ಹೀಗೆ? ಕಾರಣ ಹುಡುಕುವುದು ಸುಲಭವೂ ಅಲ್ಲ – ಸೂಕ್ತವೂ ಅಲ್ಲ ಸಂಕೋಚ ಲಜ್ಜೆ ತುಂಬ ಉತ್ತಮ – ಅಗತ್ಯ – ನಿಜ. ಆದರೆ ಅದು ಒಬ್ಬರಿಗೆ ಲಾಭಕರ–ಇನ್ನೊಬ್ಬರಿಗೆ ಹಾನಿಕರ.

ಸಲಜ್ಜಾ ಗಣಿಕಾ ನಷ್ಟಾ
ನಿರ್ಲಜ್ಜಾ ಚ ಕುಲಾಂಗನಾ
ಅಸಂತುಷ್ಟೋ ದ್ವಿಜೋ ನಷ್ಟಃ
ಸಂತುಷ್ಟಶ್ಚ ಮಹೀಪತಿಃ

ಚಿನ್ನವೆಂದರೆ ಎಲ್ಲರೂ ಬಾಯಿ ಬಿಡುತ್ತಾರೆ – ಅದು ಅಮೂಲ್ಯ ವಸ್ತು, ಆದರೇನು – ಬಂಗಾರಕ್ಕೆ ಸಂತೋಷವಿದೆಯೆ? ಆನಂದವಿದೆಯೆ? ಅದಕ್ಕೂ ಒಂದು ಸಂಕಟವಿದೆಯಂತೆ;

ಅಗ್ನಿದಾಹೇ ನ ಮೇ ದುಃಖಂ
ಛೇದೇನ ನಿಕಷೇನ ವಾ
ಯತ್ತದೇವ ಮಹದ್ದುಃಖಂ
ಗುಂಜಯಾ ಸಹ ತೋಲನಂ

ಈ ಸುಭಾಷಿತ ಬರೆದವನು ತುಂಬ ಸ್ವಾಭಿಮಾನಿ ಇರಬಹುದು. ಪ್ರಬಲ–ಪ್ರಖರ–ಪ್ರತಿಭಾಸಂಪನ್ನನಾದರೂ. ಕಾರಣಾಂತರದಿಂದ – ಯಾವುದೋ ವಿಪತ್ತಿಗೆ ಸಿಕ್ಕಿ ಕ್ಷುದ್ರಜನಗಳ ಮಧ್ಯೆ ಬಾಳಬೇಕಾಗಿ ಬಂದಿರಬಹುದು. ಆದಕ್ಕೇ ಬಂಗಾರವನ್ನು ನೆಪಮಾಡಿಕೊಂಡು ಹೀಗೆ ಹೇಳಿದ್ದಾನೆ. ಬೆಂಕಿಯಲ್ಲಿ ಸುಟ್ಟರೂ, ಸುತ್ತಿಯಿಂದ ಹೊಡೆದರೂ, ಒರೆಗಲ್ಲಿನ ಮೇಲೆ ಕರಕರನೆ ಉಜ್ಜಿದರೂ – ದ್ರಾವಕಕ್ಕೆ ಹಾಕಿದರೂ ಬಂಗಾರಕ್ಕೆ ದುಃಖವಿಲ್ಲವಂತೆ. ಆದರೆ ಅದಕ್ಕಿರುವ ಏಕಮಾತ್ರ ಸಂಕಟವೇನು ಗೊತ್ತೆ! ಕೆಲಸಕ್ಕೆ ಬಾರದ ಗಲಗಂಜಿಯ ಜತೆಯಲ್ಲಿಟ್ಟು ತೂಗುವರಲ್ಲಾ – ಎಂದು!!

ಮೂರ್ಖರ ಮಾತಿಗೆ ಅಧಿಕ ಮನ್ನಣೆ ಇರುವಾಗ ಬುದ್ಧಿವಂತನಾದವನು ಮೌನವಾಗಿರುವುದೇ ಕ್ಷೇಮ. ಇದು ಕಾಲ ಸ್ಥಿತಿಯೆಂದುಕೊಂಡು ಸಮಾಧಾನ ತಾಳುವುದೇ ಹಿತಕರ.

ಕೋಲಾಹಲೇ ಕಾಕಕುಲಸ್ಯ ಜಾತೇ
ವಿರಾಜತೇ ಕೋಕಿಲ ಕೂಜಿತಂ ಕಿಂ
ಪರಸ್ಪರಂ ಸಂವದತಾಂ ಖಲಾನಾಂ
ಮೌನಂ ವಿಧೇಯಂ ಸತತಂ ಸುಧೀಭಿಃ

ಕಾಗೆಗಳು ಬಲವಾಗಿ ಕಿರಿಚುತ್ತಿರುವಾಗ ಕೋಗಿಲೆ ಅಲ್ಲಿ ಸ್ಪರ್ಧೆಗೆ ಇಳಿಯದೆ–ಮೌನವಾಗಿರುವುದು ಕ್ಷೇಮ.

ಸಂಸ್ಕೃತ ಸಾಹಿತ್ಯ ಶ್ರೀ ಸಂಪನ್ನ ಸಾಹಿತ್ಯ. ಅಲ್ಲಿನ ಕವಿಗಳ ಸೂಕ್ಷ್ಮ ಪರ್ಯವೇಕ್ಷಣ ಶಕ್ತಿ, ಉಕ್ತಿಗಾಂಭೀರ್ಯ, ಸೂಕ್ತಿ ಲಾಲಿತ್ಯ– ಸಾಹಿತ್ಯ ಸೌಂದರ್ಯ – ನಿರೂಪಣಾ ಚಮತ್ಕಾರ–ಮಾತಿನ ಹೊಳಪು – ತೋಡಿರಾಗದ ವೈಭವದಂತೆ ತೋಡಿದಷ್ಟು ಸೊಗಸು.

ಭಾಷಾಸು ಮಧುರಾ ಮುಖ್ಯಾ
ದಿವ್ಯಾ ಗೀರ್ವಾಣ ಭಾರತೀ
ತಸ್ಮಾದ್ಧಿ ಕಾವ್ಯಂ ಮಧುರಂ
ತಸ್ಮಾದಪಿ ಸುಭಾಷಿತಮ್

—

(6ನೇ ಪುಟದಿಂದ)

ರಾಮ, ಶ್ರೀರಾಮ, ಕೃಷ್ಣ, ಬುದ್ಧ, ಕಲ್ಕಿ ಅವತಾರಗಳು ಗೋಚರಿಸುತ್ತವೆ. ಪುರಂದರ ದಾಸರಂತೆ ಕನಕದಾಸರು ಪ್ರಹ್ಲಾದ ವರದ ಮೂರ್ತಿಯನ್ನು ಹೊಗಳಿದ್ದು ಒಂದು ವಿಶೇಷ.

ಅಹೋಬಿಲ ಸ್ವಾಮಿಯನ್ನು ಕುರಿತು ಸುದೀರ್ಘವಾದ ಸುಳಾದಿಯನ್ನು ಬರೆದ ಕೀರ್ತಿ ಗೋಪಾಲದಾಸರಿಗೆ ಸಲ್ಲುತ್ತದೆ. 'ಮೋಹನ' ರಾಗದಲ್ಲಿ ಹಾಡುವ ಹಾಡು. 79 ಪಂಕ್ತಿಗಳ ಸುಳಾದಿ ಇದು. ಇದರಲ್ಲಿ ಸ್ಥಳಪುರಾಣ, ತೀರ್ಥಗಳು, ನರಸಿಂಹನ ರೂಪಾಲಂಕಾರ, ಹರಿಯ ಅನಂತ ರೂಪಗಳ ವರ್ಣನೆಗಳು ಕಾಣುತ್ತವೆ. ನರಸಿಂಹನ ಸೇವಿಸಿ ವರಗಳನ್ನು ಪಡೆದ ಎರಡು ಕಥೆಗಳನ್ನು ದಾಸರು ಹೇಳಿದ್ದಾರೆ. ಆಂಧ್ರ ವಾಙ್ಮಯದಲ್ಲಿ ಈ ಕಥೆಗಳಿಲ್ಲ.

ಮಾರ್ಕಂಡೇಯ ಒಬ್ಬ ಮಹರ್ಷಿ, ಅವನು ಮೃಕಂಡಮುನಿಯ ಮಗ, ಈ ಋಷಿ ಪರಮಾತ್ಮನನ್ನು ತಪಸ್ಸಿಂದ ಮೆಚ್ಚಿಸಿ ಆತನ ಮಾಯೆಯನ್ನು ತೋರುವಂತೆ ಕೇಳಿದ, ದೇವರು ತಥಾಸ್ತುವೆಂದು ಕಣ್ಮರೆಯಾಗಿ ಮಾರ್ಕಂಡೇಯನಿಗೆ ತನ್ನ ಮಾಯೆ ತೋರಿದ.

ಅನಂತನ್ನ ನೋಡಿ ಅಗಣಿತ ಗುಣಗಣನ
ಅನಂತಸೇವೆ ಅಹೋಬಿಲ
ನಾರಸಿಂಹನಾಗಿ
ಅನಂತ ಪರಿಯ ತುತಿಪೊ
ಆ ಮಾರ್ಕಂಡೇಯಗೊಲಿದು
ಅನಂತಮೂರ್ತಿ ತೋರಿ
ಆತನ ವ್ರತವ ಗೆಲಿಸಿ

ಎಂದು ಹಾಡಿದ್ದಾರೆ. ಅವರು ಹೇಳಿದ ಮತ್ತೊಂದು ಕಥೆ ಚಂಡಶಾಸನಕಥೆ. ಚಂಡಶಾಸನನು ಹೆಸರಿಗೆ ತಕ್ಕಂತ ದುಷ್ಟನು. ಅವನು ಕವಿಗಳನ್ನು ದೂಷಿಸುತ್ತ ಇದ್ದನು. ಬಹುವಿಪ್ರರ ದ್ರೋಹ ಮಾಡಿದನು. ಭವಪೀಡಿತನಾದನು. ಆದ್ದರಿಂದ ಅವನಿಗೆ ಬ್ರಹ್ಮಹತ್ಯಾ ದೋಷವು ಬಂತು. ಜವನ ದೂತರು ಬಂದು ಜಬರಿಸಿ ಒಯ್ದರು. ಆಗ ಅವನ ಅಂಗುಟ ಬೆರಲು ಭವನಾಶಿನಿಯಲ್ಲಿ ಬಿತ್ತು. ಭವತರಿದನು. ಅವನೇ ದಶರಥ ರಾಜನಾದನು.

ಭವನಾಶಿನಿ ತೀರ್ಥದಲ್ಲಿ ತಾನೆ ನಿಂದು
ಅವನಿಯೊಳಗೆ ಒಬ್ಬ ಚಂಡಶಾಸನನು
ಎಂಬುವನು ತಾನು ಬಲು ಕವಿಗಳ
ದೂಷಿಸುತ
ಭವಪೀಡಿತನಾಗಿ ಬಹು ವಿಪ್ರರ ದ್ರೋ
ಹವನು ತಾಕಿ ಶವನು ಆಗಿ ಬೀಳೆ
ಜವನ ದೂತರು ಬಂದು ಜಬರಿಸಿ
ಒಯ್ಯುವ ಸಮಯ
ಕ್ಕವನ ಅಂಗುಟ ಬೆರಳ ಬವನಾಶಿನಿ
ಬೀಳೆ
ಭವ ತರಿದು ಅನುಭವಕೆ ತಂದು ಇತ್ತು
ಭುವನದೊಳಗೆ ದಶರಥರಾಯನೆ ಆದ

ಈ ದಾಸರೇ ಭವನಾಶಿನಿ, ಸಿರಿ ದೇವಿ ಪೆಸರಿನತೀರ್ಥ, ಗರುಡತೀರ್ಥ, ಉರಗತೀರ್ಥ, ವಾಯುತೀರ್ಥಗಳನ್ನು ಪರಿಚಯ ಮಾಡುತ್ತಾರೆ. ಇದೇರೀತಿ ಅಹೋಬಿಲದ ಸಮೀಪದಲ್ಲಿದ್ದ ನವನಾರಸಿಂಹಗಳ ಪ್ರಸ್ತಾಪನೆ ಮಾಡದಿದ್ದರೂ ಸ್ಥೂಲವಾಗಿ ಅವುಗಳನ್ನು ಪ್ರಸ್ತಾಪಿಸಿದ್ದಾರೆ.

ಇಲ್ಲಿ ಉಂಟು ಅಲ್ಲಿ ಇಲ್ಲ
ಅಲ್ಲಿ ಉಂಟು ಇಲ್ಲಿ ಇಲ್ಲ
ಸೊಲ್ಲನಾಡ ಸಲ್ಲದು
ಎಲ್ಲಿನೋಡಲು ವಿಶ್ವಮೂರ್ತಿ ತಾ
ಪೊಳೆವ
ಇಲ್ಲಿ ಅನಂತಾನಂತನಾಗಿ ಮೆಲ್ಲಗೆ
ತಾ ತೋರುತಿಪ್ಪ
ಇಲ್ಲೆ ಅನಂತಾಯುಧಗಳು ಬಲ್ಲವರಿಗೆ
ತೋರುತಿಪ್ಪ
ಇಲ್ಲಿ ಅನಂತ ರೂಪಗಳು ಬಲ್ಲವರಿಗೆ
ತೋರುತಿಪ್ಪ

ಇದರಲ್ಲಿ ಜ್ವಾಲ, ಅಹೋಬಿಲ, ಮಾಲೋಲ ಕ್ರೋಡಾಕಾರ, ಕಾರಂಜ, ಭಾರ್ಗವ, ಯೋಗಾನಂದ ಛತ್ರ, ವಟ, ಪಾವನ ನರಸಿಂಹಮೂರ್ತಿಗಳ ಆಕಾರ ವಿಶೇಷವು ಕಾಣುತ್ತವೆ.

ದಾಸರಗಳಲ್ಲಿ ಜಗನ್ನಾಥದಾಸರು ಅಹೋಬಿಲ ನರಸಿಂಹನ ಕುರಿತು ಪ್ರತ್ಯೇಕವಾಗಿ ಕೀರ್ತನೆ ಬರೆಯಲಿಲ್ಲ. ಆದರೂ ತೀರ್ಥ ಕ್ಷೇತ್ರ ಸ್ಮರಣೆಯಲ್ಲಿ ಕುಮುದ್ವತೀ ಭವನಾಶಿನೀ ನದಿಗಳನ್ನು ಪ್ರಸ್ತಾಪಿಸಿದ್ದಾರೆ.

ಭಾಗೀರಥ್ಯಾದಿ ನದಿಗಳ ತಾರತಮ್ಯ ನಿಜ
ಭಾಗವತ ತಿಲಕ ನಿಮಿರಾಜ ಗೊಲಿದು
ವಸಿಷ್ಠ
ಯೋಗೀಶ ಪೇಳ್ದ ಸುಕಥಾಕುತೂಹಲನು
ರಾಗದಲಿ ಕೇಳಿ ಜನರಯ್ಯಾ
ಸಿಂಧು ಭವನಾಗೀರ್ವರು ಸಮರು
ಕ್ಷೀರಾಬ್ಧಿ
ಮಂದಿರ ನೃಸಿಂಹರಲ್ಲಿಹರು ಭವನಾಶನಿಗೆ
ಸುಂದರ ಕುಮುದ್ವತಿಯು

ಪಶ್ಚಿಮ ಚಾಳುಕ್ಯ ಅರಸರಲ್ಲಿ ವಿಕ್ರಮಾದಿತ್ಯನು ನರಸಿಂಹ ದೇವರನ್ನು ಸೇವಿಸಿದಂತೆ ಶಾಸನಗಳು ಹೇಳುತ್ತವೆ. ಪ್ರತಾಪರುದ್ರದೇವನು ಅಹೋಬಿಲನಿಗೆ ಉತ್ಸವ ವಿಗ್ರಹ ಮಾಡಿಸಿದ. ಶ್ರೀಕೃಷ್ಣದೇವರಾಯನು ಕಳಿಂಗ ವಿಜಯಾನಂತರ ಸ್ವಾಮಿಗೆ ಕಾಣಿಕೆ ಕೊಟ್ಟ. ಸುಂದರ ಮಂಟಪವನ್ನು ಕಟ್ಟಿಸಿದ. ಶ್ರೀ ಕೃಷ್ಣದೇವರಾಯ ಕಾಲದವರಾದ ಪುರಂದರ ಕನಕದಾಸರು ನರಸಿಂಹನನ್ನು ಸೇವಿಸುವುದರಲ್ಲಿ ಆಶ್ಚರ್ಯವಿಲ್ಲ. ಆ ಮೇಲೆ ದಾಸರಿಗೆ ಅಹೋಬಿಲ ದರ್ಶನೀಯಸ್ಥಲವಾಯಿತೆಂದು ಹೇಳಬಹುದು.

★

## ವಾರ್ತಾಲಹರಿ

### ತಿರುಮಲೆ ತಿರುಪತಿ ದೇವಸ್ಥಾನಗಳ

## ಆಡಳಿತ ವ್ಯವಸ್ಥೆಯ

# ಸ್ವರ್ಣ ಮಹೋತ್ಸವಗಳು

1933 ರಲ್ಲಿ ಜಾರಿಗೆ ಬಂದ ತಿ. ತಿ. ದೇವಸ್ಥಾನಗಳ ಆಡಳಿತ ವ್ಯವಸ್ಥೆಗೆ 50 ವರ್ಷ ತುಂಬಿದ ನೆನಪಿನಲ್ಲಿ 1984 ರ ಏಪ್ರಿಲ್ 22, 23, 24 ರ ಮೂರು ದಿನಗಳು ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ವಿಶಾಲವಾದ ಆಟದ ಮೈದಾನದಲ್ಲಿ ಬಹುಜನಪ್ರಿಯವಾಗುವಂತೆ ಯಶಸ್ವಿಯಾಗಿ ಸ್ವರ್ಣೋತ್ಸವಗಳನ್ನು ನಡೆಸಲಾಯಿತು.

ವಿಶ್ವವಿದ್ಯಾನಿಲಯದ ಆಟದ ಮೈದಾನದ ಅಗಲಕ್ಕೂ ಹರಡಿದ್ದ ವಿಶಾಲವಾದ ಚಪ್ಪರದ ವಿವಿಧ ಭಾಗಗಳು ಸಪ್ತಗಿರಿಗಳ ಹೆಸರನ್ನು ಹೊಂದಿದ್ದು, ಸ್ವರ್ಣೋತ್ಸವ ವೇದಿಕೆ, ಹಾಗೂ ತತ್ಕಾಲಿಕವಾಗಿ ನಿರ್ಮಿಸಲಾಗಿದ್ದ ಯಾಗಶಾಲೆಗಳಿಗೆ ಅಭಿಮುಖವಾಗಿದ್ದಿತು. ಸ್ವರ್ಣೋತ್ಸವದ ಮೂರುದಿನವೂ ಶ್ರೀ ಗೋವಿಂದರಾಜಸ್ವಾಮಿಯ ಉತ್ಸವ ವಿಗ್ರಹಗಳು, ಶ್ರೀ ಕೋದಂಡರಾಮ ಸ್ವಾಮಿ ಉತ್ಸವ ವಿಗ್ರಹಗಳು, ಶ್ರೀ ಕಪಿಲೇಶ್ವರ ಸ್ವಾಮಿ ಹಾಗೂ ಕಾಮಾಕ್ಷೀ ಅಮ್ಮನವರ ಉತ್ಸವ ವಿಗ್ರಹಗಳನ್ನು ಯಾಗಶಾಲೆಗೆ ಆಯಾಯಾ ದೇವಾಲಯಗಳಿಂದ ಮೆರವಣಿಗೆಯಲ್ಲಿ ತೆಗೆದುಕೊಂಡುಬಂದು ಯಾಗಶಾಲೆಯಲ್ಲಿ ಆಸೀನಗೊಳಿಸಿ ಮೊದಲೆರಡು ದಿನಗಳು ಮಹಾಶಾಂತಿ ಹೋಮವನ್ನೂ ಕೊನೆಯದಿನ ಮಹಾರುದ್ರ ಹೋಮವನ್ನೂ, ಮಾಡಲಾಯಿತು. ವೇದಿಕೆಯಲ್ಲಿ ಆಸೀನರಾದವರಿಗೂ ಚಪ್ಪರದಡಿಯಲ್ಲಿ ಕುಳಿತ ಸಭಿಕರಿಗೂ ನಯನಾನಂದಕರವಾಗಿದ್ದ ಈ ಹೋಮ, ಪೂಜೆಗಳು ಎಲ್ಲ ಕಡೆಯಿಂದಲೂ ಚೆನ್ನಾಗಿ ಕಾಣುವ ರೀತಿಯಲ್ಲಿ ಏರ್ಪಾಡಾಗಿದ್ದವು. ತಿರುಪತಿಯಿಂದ ತುಸುಹೊರಗೆ ಎನ್ನಬಹುದಾದ ವಿಶ್ವವಿದ್ಯಾನಿಲಯದ ಆಟದ ಮೈದಾನಕ್ಕೆ ಬಂದು ಹೋಗಲು ಅನುಕೂಲವಾಗುವಂತೆ ತಿರುಪತಿಯ ವಿವಿಧ ಭಾಗಗಳಿಗೆ ತಿ. ತಿ. ದೇವಸ್ಥಾನಗಳ ವತಿಯಿಂದ ಉಚಿತ ವಾಹನಸೌಕರ್ಯ ಏರ್ಪಾಡಾಗಿದ್ದು, ತಿರುಪತಿಯ ಪ್ರತಿ ಮನೆಗೂ ಆಹ್ವಾನ ಪತ್ರವನ್ನು ತಲುಪಿಸಿದ್ದು, ಸರ್ವರೂ ಪಾಲುಗೊಂಡು ದಿನದಿನವೂ ಸಭಾಮಂಟಪ ತುಂಬಿ ತುಳುಕುತ್ತಿದ್ದದ್ದು ಸಾಮಾನ್ಯ ದೃಶ್ಯವಾಗಿದ್ದಿತು. ತಿ. ತಿ. ದೇ. ಪ್ರಕಟನ ಶಾಖೆಯ ಮಾರಾಟ ಮಳಿಗೆ, ಹೊರಗಣಿಂದ ಉತ್ಸವಗಳಲ್ಲಿ ಪಾಲುಗೊಳ್ಳಲು ಬಂದ ಯಾತ್ರಿಕರಿಗಾಗಿ ತಿ. ತಿ. ದೇ. ಕ್ಯಾಂಟೀನ್ ಸರಬರಾಜು ಮಾಡಿದ ರಿಯಾಯಿತಿ ದರದ ಆಹಾರದ ಪೊಟ್ಟಣ ವಿತರಣೆ, ಹಿಂದೂ ಧರ್ಮ ರಕ್ಷಣ ಸಂಸ್ಥೆಯವರ ಧಾರ್ಮಿಕ ಗ್ರಂಥಗಳ ಉಚಿತ ವಿತರಣೆ, ತಿ. ತಿ. ದೇ. ತೋಟಗಾರಿಕೆ ಇಲಾಖೆಯ ವಿಶೇಷ ಶ್ರಮದಿಂದ ನಿರ್ಮಾಣವಾದ ತತ್ಕಾಲಿಕ ಉಪವನ, ಫಲಪುಷ್ಪ ಪ್ರದರ್ಶನ, ದಾಸಸಾಹಿತ್ಯ ಪ್ರಾಜೆಕ್ಟ್, ಶ್ರೀ ವೆಂಕಟೇಶ್ವರ ದೇವಾಲಯಕಲಾವಸ್ತುಪ್ರದರ್ಶನ ವಿಭಾಗ ಹಾಗೂ ಸಪ್ತಗಿರಿ ಪತ್ರಿಕೆಯ ಪ್ರದರ್ಶನ ಮಳಿಗೆಗಳಿಂದಾಗಿ ವೇದಿಕೆಯಲ್ಲಿ ಕಾರ್ಯಕ್ರಮಗಳಿಲ್ಲದ ಮಧ್ಯಾಹ್ನದ ಬಿಡುವಿನ ವೇಳೆಗಳಲ್ಲಿಯೂ ಜನಸೂಜಿಗಲ್ಲಿನಿಂದ ಆಕರ್ಷಿತರಾದವರಂತೆ ಸ್ವರ್ಣೋತ್ಸವ ಮೈದಾನದತ್ತ ಹರಿಯುತ್ತಿದ್ದಿತು.

ಸ್ವರ್ಣೋತ್ಸವಗಳಿಗಾಗಿ ತಿರುಪತಿ ತಿರುಮಲೆಗಳ ಬೀದಿಬೀದಿಯೂ ರಾಷ್ಟ್ರೀಯ ಹಬ್ಬದೋಪಾದಿಯಲ್ಲಿ ತಳಿರು ತೋರಣಗಳಿಂದ ಅಲಂಕರಣ ಹೊಂದಿದ್ದು, ಸ್ವರ್ಣೋತ್ಸವ ಮೈದಾನದ ಮುಖ್ಯ ಮಾರ್ಗಗಳಲ್ಲಿ ವಿವಿಧ ವರ್ಣಗಳ ಸ್ವಾಗತ ಕಮಾನುಗಳನ್ನು ನಿಲ್ಲಿಸಲಾಗಿದ್ದು, ಅವುಗಳ ಮೇಲೆಲ್ಲ ಹರಿದಾಸರ, ಆಳ್ವಾರರ, ತಾಳ್ಲಪಾಕ ವಂಶಜರ ನುಡಿ ಮುತ್ತಿನ ಗುಡಿ ತೋರಣಗಳನ್ನು ಕಟ್ಟಲಾಗಿದ್ದು ಹೆಚ್ಚು ಜನವನ್ನು ನಿಂತು ಓದುವಂತೆ ಮಾಡುತ್ತಿದ್ದವು. ತಿ. ತಿ. ದೇ. ಆಡಳಿತದ ಎಲ್ಲ ದೇವಾಲಯಗಳೂ, ಭವನಗಳೂ ವಿಶೇಷರೀತಿಯ ವಿದ್ಯುದಲಂಕರಣ, ತಳಿರುತೋರಣಗಳನ್ನು ಹೊಂದಿ ಭವ್ಯ ದಿವ್ಯವಾಗಿ ಕಂಗೊಳಿಸಿದವು.

ಸ್ವರ್ಣೋತ್ಸವದ ವಿಶಾಲ ಸಭಾಮಂಟಪದಲ್ಲಿ ಅಲ್ಲಲ್ಲಿ ಕ್ಲೋಸ್ಡ್ ಸರ್ಕ್ಯೂಟ್ ಟಿ. ವಿ. ಯನ್ನೂ ಏರ್ಪಾಡು ಮಾಡಲಾಗಿದ್ದಿತು. ವಿಶೇಷ ಆಹ್ವಾನಿತರು, ಸನ್ಮಾನಕ್ಕೆ ಆಹ್ವಾನಿಸಲ್ಪಟ್ಟ ವಿದ್ವಾಂಸರು, ವಿವಿಧೆಡೆಗಳಿಂದ ಉತ್ಸವಗಳಿಗಾಗಿ ಆಗಮಿಸಿದ ಭಜನಮಂಡಳಿಗಳು – ಮೊದಲಾದವರಿಗಾಗಿ ಬೇರೆ ಬೇರೆ ಸ್ಥಳಗಳನ್ನು ಮೀಸಲಿಡಲಾಗಿದ್ದಿತು.

22–4–84 ರಂದು ಬೆಳಗ್ಗೆ ಶ್ರೀ ಗೋವಿಂದ ರಾಜಸ್ವಾಮಿಯವರ ಉತ್ಸವ ವಿಗ್ರಹಗಳನ್ನು ಮೆರವಣಿಗೆಯಲ್ಲಿ ಸ್ವರ್ಣೋತ್ಸವದ ಯಾಗಶಾಲೆಗೆ ಕರೆತರಲಾಯಿತು. ತಿ. ತಿ. ದೇ. ಆಸ್ಥಾನ ವಿದ್ವಾಂಸ ಶ್ರೀನಾಮಗಿರಿ ಪೇಟೆ ಕೃಷ್ಣನ್ ಹಾಗೂ ವೃಂದದವರ ನಾದಸ್ವರದ ದೇವಗಾಯನದ ನಡುವೆ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ದಂಪತಿಗಳನ್ನು ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ ವಿ. ಸತ್ಯನಾರಾಯಣ ರಾಜು, ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ, ಆಂಧ್ರ ಪ್ರದೇಶ್ ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಬಿ. ಎನ್ ಜಯಸಿಂಹ ಮೊದಲಾದ ಹಿರಿಯರು ಪೂರ್ಣಕುಂಭದೊಡನೆ ಸ್ವಾಗತಿಸಿದರು. ಮುಖ್ಯಮಂತ್ರಿ ದಂಪತಿಗಳು ಶ್ರೀ ಗೋವಿಂದ ರಾಜಸ್ವಾಮಿ ಉತ್ಸವ ಮೂರ್ತಿಗಳನ್ನು ಪೂಜಿಸಿ, ಅಂದಿನ ಮಹಾಶಾಂತಿ ಹೋಮದಲ್ಲಿ ಭಾಗವಹಿಸಿದ ನಂತರ ವೇದಿಕೆಯ ಪಕ್ಕದಲ್ಲಿ ಸ್ವರ್ಣೋತ್ಸವಗಳ ಉದ್ಘಾಟನೆಯ ಅಂಗವಾಗಿ ಏರ್ಪಡಿಸಿದ್ದ ಶಿಲಾಫಲಕವನ್ನು ಅನಾವರಣಗೊಳಿಸಿದರು

ಉದ್ಘಾಟನಾ ಸಮಾರಂಭವು ಎಸ್. ವಿ. ಬಾಲಮಂದಿರದ ವಿದ್ಯಾರ್ಥಿಗಳ ಭಗವದ್ಗೀತಾ ಪಠಣದಿಂದ ಆರಂಭವಾಯಿತು. ತಿ. ತಿ. ದೇ. ಬೋರ್ಡ್‌ಸದಸ್ಯ ಶ್ರೀ ಪಿ. ವೆಂಕಟೇಶ್ವರುಲು ಅವರು ಆಂಧ್ರಪ್ರದೇಶದ ದೇವಾದಾಯ ಶಾಖಾ ಮಂತ್ರಿಯೂ ಆಗಿರುವ ಮುಖ್ಯ ಮಂತ್ರಿಯನ್ನೂ ಸಭಿಕರನ್ನೂ ಸ್ವಾಗತಿಸಿದರು.

ಪರಿಚಯವನ್ನು ಮಾಡಿಕೊಡುತ್ತ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣ ರಾಜು ಅವರು ಸ್ವರ್ಣೋತ್ಸವಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಮುಖ್ಯಮಂತ್ರಿಗಳನ್ನು ಅಭಿನಂದಿಸಿದರು ಕಾರ್ಯನಿರ್ವಹಣಾಧಿ ಶ್ರೀ ಜಿ. ಕುಮಾರ ಸ್ವಾಮಿ ರೆಡ್ಡಿಯವರು ಐವತ್ತು

ವರ್ಷಗಳ ತಿ. ತಿ. ದೇ. ಆಡಳಿತ ವ್ಯವಸ್ಥೆಯ ಪ್ರಮುಖ ಘಟ್ಟಗಳನ್ನು ವಿವರಿಸುತ್ತ, ಯಾತ್ರಿಕರ ಅನುಕೂಲಗಳಿಗಾಗಿ ವಸತಿ ಸೌಕರ್ಯಗಳು, ಅವರ ಹರಕೆಗಳ ನಿರ್ವಹಣೆಯಲ್ಲಿ ಕಲ್ಪಿಸಲಾದ ಅನುಕೂಲಗಳು, ಸ್ವಾಮಿ ದರ್ಶನವು ಸರ್ವರಿಗೂ ದೊರೆಯುವಂತೆ ಮಾಡುವುದರಲ್ಲಿ ಮಾಡಿರುವ ಸುಧಾರಣೆಗಳನ್ನು ಕುರಿತು ತಿಳಿಸಿದ್ದೇ ಅಲ್ಲದೆ, ತಿ. ತಿ. ದೇ. ನಿರ್ವಹಣೆಯ ಮಾನವೋಪಯೋಗಿ ಸೇವೆಗಳನ್ನೂ ಆರೋಗ್ಯ ಕೇಂದ್ರಗಳು, ಅನಾಥಾಲಯ, ಮೂಗ ಬಧಿರಾಂಧ ಪಾಠಶಾಲೆ, ಶಿಕ್ಷಣ ಕ್ಷೇತ್ರದ ಸೇವೆಗಳು–ಮೊದಲಾದುವನ್ನೂ, ವೇದಾಗಮಗಳ ಶಿಕ್ಷಣ ಕೇಂದ್ರಗಳು, ಲಲಿತಕಲಾ ಶಿಕ್ಷಣ ಕೇಂದ್ರಗಳು ಮೊದಲಾದ ಸಂಸ್ಕೃತಿ ಪ್ರಸಾರಕ ಕಾರ್ಯಗಳನ್ನೂ ಕುರಿತು ತಿಳಿಸಿದರು.

ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಬಿ. ಎನ್. ಜಯಸಿಂಹ ಅವರು ಮಾತನಾಡುತ್ತ ದೇಶ ವಿದೇಶಗಳಿಂದ ಅಲ್ಲಿನ ದೇವಾಲಯಗಳಿಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿ ವಿಗ್ರಹಗಳ ಬೇಡಿಕೆ ಹೆಚ್ಚುತ್ತಿದೆಯೆಂದು ತಿಳಿಸಿದರು.

ಶ್ರೀ ಎನ್. ಟಿ. ರಾಮರಾಯರ ಪತ್ನಿ ಶ್ರೀಮತಿ ಬಸವ ತಾರಕಂ ಅವರು ಸ್ವರ್ಣೋತ್ಸವದ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು. ನಂತರ ಸ್ವರ್ಣೋತ್ಸವದ ನೆನಪಿನಲ್ಲಿ ತಿ. ತಿ. ದೇ. ಪ್ರಕಟಿಸಿದ 50 ಧಾರ್ಮಿಕ ಪುಸ್ತಕಗಳನ್ನು ಶ್ರೀ ಎನ್.ಟಿ. ರಾಮರಾಯರು ಬಿಡುಗಡೆ ಮಾಡಿದರು. ತಿ.ತಿ.ದೇ. ಪೌರಸಂಬಂಧಾಧಿಕಾರಿ ಶ್ರೀರಾವುಲ ಸೂರ್ಯನಾರಾಯಣಮೂರ್ತಿ ಅವರು ಲೇಖಕರ ಪರಿಚಯ ಮಾಡಿ ಕೊಡುತ್ತಿರುವಂತೆ, ಪುಸ್ತಕಗಳನ್ನು ಬಿಡುಗಡೆ ಮಾಡಿದ ಮುಖ್ಯ ಮಂತ್ರಿಗಳು, ಲೇಖಕರನ್ನು ಅಭಿನಂದಿಸುತ್ತ, 'ಜನ ಈ ಪುಸ್ತಕಗಳನ್ನು ಆಸಕ್ತಿಯಿಂದ ಸ್ವೀಕರಿಸುವಂತಾಗಲಿ' ಎಂದು ಹಾರೈಸಿದರು. 'ವಿಜ್ಞಾನ ಹಾಗೂ ಧರ್ಮ' ಎಂಬ ವಿಷಯದ ಬಗ್ಗೆ ತಿ. ತಿ. ದೇ. ನಿರ್ವಹಿಸಿದ ಸ್ನಾತಕೋತ್ತರ ಪದವೀಧರರ ಚರ್ಚಾಸ್ಪರ್ಧೆಯಲ್ಲಿ ಗೆದ್ದವರಿಗೆ ಬಹುಮಾನ ವಿನಿಯೋಗ ಮಾಡಿದರು.

ಮುಖ್ಯ ಮಂತ್ರಿಗಳು ತಮ್ಮ ಭಾಷಣದಲ್ಲಿ ತಿರುಪತಿಯನ್ನು ವ್ಯಾಟಿಕನ್‌ನಂತೆಯೇ ಸ್ವತಂತ್ರ ನಗರವಾಗಿ ಬೆಳೆಸಿ, ಹಿಂದೂ ಸಂಸ್ಕೃತಿಯ ಮೂಲ ಕೇಂದ್ರವನ್ನಾಗಿಸಬೇಕೆಂಬ ತಮ್ಮ ಆಶಯವನ್ನು ವ್ಯಕ್ತಗೊಳಿಸುತ್ತ, ತಿ. ತಿ. ದೇವಸ್ಥಾನಗಳ ಮಾನವೋಪಯೋಗಿ ಕಾರ್ಯಕ್ರಮಗಳನ್ನು ಮೆಚ್ಚಿಕೊಂಡು ಇಂತಹ ಕೆಲಸಗಳು ಹೆಚ್ಚಾಗಬೇಕೆಂದೂ ಕರೆ ನೀಡುತ್ತ ಇಂತಹದೊಂದು ಹಿರಿಯ ಅಭಿವೃದ್ಧಿಗೆ ಸಹಕರಿಸಿದ ಎಲ್ಲ ತಿ. ತಿ. ದೇ. ಉದ್ಯೋಗಿಗಳನ್ನೂ ಸಾರ್ವಜನಿಕರನ್ನೂ ಅಭಿನಂದಿಸಿದರು.

ತಿ. ತಿ. ದೇ. ಬೋರ್ಡ್ ಸದಸ್ಯ ಶ್ರೀ ತಳಾರಿ ರುದ್ರಯ್ಯ ಅವರು ವಂದನಾರ್ಪಣೆ ಮಾಡಿದ ನಂತರ ಮುಖ್ಯ ಮಂತ್ರಿಯವರು ತಿ ತಿ. ದೇ ಉಪವನ ವಿಭಾಗದಲ್ಲಿ ಈ ಸವಿನೆನಪಿನಲ್ಲಿ ಹೊಸದಾಗಿ ಕಸಿಮಾಡಿದ ಕ್ರೋಟನ್‌ಗೆ ನಾಮಕರಣ ಮಾಡಿ ವಸ್ತುಪ್ರದರ್ಶನ ವಿಭಾಗಕ್ಕೆ ಆಗಮಿಸಿದರು. ಅಲ್ಲಿ ಉಪವನ ವಿಭಾಗದ ಫಲಪುಷ್ಪ ಪ್ರದರ್ಶನ, ದೇವಾಲಯವಸ್ತು ಕಲಾಪ್ರದರ್ಶನ, ಸಪ್ತಗಿರಿ ಪತ್ರಿಕಾ ಪ್ರದರ್ಶನ, ತಿ. ತಿ. ದೇ. ಪ್ರಕಟನೆಗಳ ಮಾರಾಟ ಮಳಿಗೆ, ದಾಸಸಾಹಿತ್ಯ ಪ್ರದರ್ಶನ ಮೊದಲಾದವುಗಳನ್ನು ಕಂಡು ಆನಂದಿಸಿ ತಾವು ಇದರಲ್ಲಿ ಭಾಗವಹಿಸಲು ಕಾರಣರಾದ ಕಾರ್ಯಕರ್ತರನ್ನು ವಂದಿಸಿದರು.

ಅಂದಿನ ಸಂಜೆಯ ಕಾರ್ಯಕ್ರಮಗಳು ವಿವಿಧ ರೀತಿಯ ಸಾಮೂಹಿಕ ಭಜನಗೋಷ್ಠಿಗಳೊಂದಿಗೆ ಆರಂಭವಾದವು. ಈ ಕಾರ್ಯಕ್ರಮಗಳಿಗಾಗಿಯೇ ದೇಶದ ವಿವಿಧ ಮೂಲೆಗಳಿಂದ ಹಲವಾರು ಭಜನ ಮಂಡಳಿಗಳು ತಿರುಪತಿಗೆ ಆಗಮಿಸಿದ್ದವು.

ನಂತರದ ಸಂಗೀತ ಸಭೆಯಲ್ಲಿ ಹೈದರಾಬಾದಿನ 'ರಾಮರಸವಾಹಿನಿ'ಯ ಶ್ರೀಮತಿ ಆರ್. ಜಿ. ಶೋಭಾರಾಜು ಅವರು ಅನ್ನಮಾಚಾರ್ಯರ ಕೃತಿಗಳನ್ನು ಹಾಡಿ ರಂಜಿಸಿದರು. ಅನ್ನಮಾಚಾರ್ಯ ಪ್ರಾಜೆಕ್ಟ್‌ನ ಕಲಾವಿದರು ಹಾಡುಗಾರ್ತಿಗೆ ಸಮರ್ಥವಾಗಿ ಜೊತೆನೀಡಿದರು.

ನಂತರ ಕುಟ್ರಾಲಂನ ಶ್ರೀ ಶ್ರೀ ತ್ರಿವಿಕ್ರಮ ರಾಮಾನಂದ ಭಾರತಿ ಸ್ವಾಮಿಗಳೂ, ಗಂಡಿ ಕ್ಷೇತ್ರದ ಶ್ರೀ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳೂ ಭಕ್ತಿಯ ತೀವ್ರಭಾವದ ಬಗ್ಗೆ ಅವಧಾರಿಸಿ ಮಾತನಾಡಿದರು. ಡಾ॥ ಪ್ರಸಾದ್‌ರಾಯ ಕುಲಪತಿ, ಕವಿ ಶ್ರೀ ಬೋಯಿ ಭೀಮನ್ನ, ಕವಿ ವಿಮರ್ಶಕ ಶ್ರೀ ನಂಡೂರಿ ರಾಮಕೃಷ್ಣಮಾಚಾರ್ಯ ಅವರುಗಳು ಮಾತನಾಡಿದರು.

23–4–84 ರಂದು ಬೆಳಗ್ಗಿನ ಕಾರ್ಯಕ್ರಮಗಳು ಶ್ರೀ ಕೋದಂಡರಾಮಸ್ವಾಮಿಯವರ ಉತ್ಸವ ವಿಗ್ರಹಗಳ ಮೆರವಣಿಗೆಯ ಆಗಮನದಿಂದ ಆರಂಭವಾಯಿತು. ಮಹಾಶಾಂತಿ ಹೋಮದ ನಂತರ ಭಗವದ್ಗೀತೆಯ ಪಾರಾಯಣದಿಂದ ಆರಂಭವಾದ ಸಭೆಯಲ್ಲಿ ಶ್ರೀ ಎಂ. ಎಸ್. ರಾಮರಾಯರು ಸುಂದರಕಾಂಡದ ಪ್ರವಚನ ಮಾಡಿದರು. ಶ್ರೀ ಪುಷ್ಪಗಿರಿಯ ಪೀಠಾಧಿಪತಿಗಳು ಉಪನ್ಯಾಸ ಮಾಡುತ್ತ ಭಾರತದ ಆಧ್ಯಾತ್ಮಿಕ ಔನ್ನತ್ಯವನ್ನು ಕುರಿತು ವಿವರಿಸಿದರು.

ನಂತರ ಮಾತನಾಡಿದ ಡಾ॥ ಆರ್ಕಸೋಮಯಾಜಿ ಅವರು 'ಧರ್ಮವೇ ಮಾನವನನ್ನು ಕಾಪಾಡುವ ಏಕಮಾತ್ರ ಸಾಧನ'ವೆಂದು ವಿವರಿಸಿದರು. ಅಖಿಲಾಂಧ್ರ ಸಾಧು ಪರಿಷತ್‌ನ ಅಧ್ಯಕ್ಷ ಶ್ರೀ ಶ್ರೀ ಸರ್ವೇಶ್ವರಾನಂದ ಸ್ವಾಮಿಯವರು ಮಾತನಾಡುತ್ತ 'ಹಿಂದೂಧರ್ಮದ ವೈಶಿಷ್ಟ್ಯ ಪ್ರಚಾರ ಎಂದಿಗಿಂತ ಹೆಚ್ಚಿಗೆ ಆಗಬೇಕಾದ ಅಗತ್ಯವಿದೆ' ಎಂದರು. ಷಾದ್ ನಗರದ ಶ್ರೀ ಶ್ರೀ ಚಿನ್ಮಯಾನಂದ ಸ್ವಾಮಿಯವರು ಮಾತನಾಡುತ್ತ ತಿರುಮಲೆಯು ಸಿದ್ಧಿ ಕ್ಷೇತ್ರವೆಂಬುದನ್ನು ವಿವರಿಸಿದರು. ನಂತರ ಡಾ॥ ದಾಶರಥಿ ಅವರು ಮಾತನಾಡಿ ತಿರುಮಲೆಯು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಮಾತ್ರವೇ ಅಲ್ಲದೆ ಇಡೀ ವಿಶ್ವದ ಏಕತೆಯನ್ನು ಸಾಧಿಸುವ ಏಕಮಾತ್ರ ಸಾಧನವೆಂದು ಪರಿಗಣಿಸಬಹುದೆಂದು ವಿವರಿಸಿದರು. ಡಾ॥ ರತ್ನಾಕರ ಬಾಲರಾಜು ಅವರು ಬ್ರಹ್ಮವಿದ್ಯೆಯ ಬಗ್ಗೆ ಮಾತನಾಡಿದರು. ಶ್ರೀ ಮುದಿವರ್ತಿ ಕೊಂಡಮಾಚಾರ್ಯುಲು ಅವರು ನಾಮಸ್ಮರಣೆಯ ಮಹತ್ವವನ್ನು ವಿವರಿಸಿದರು.

ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ವಂದನಾರ್ಪಣೆ ಮಾಡಿದರು.

ಅಂದು ಸಂಜೆಯ ಕಾರ್ಯಕ್ರಮಗಳು ಭಗವದ್ಗೀತೆಯ ಪಾರಾಯಣ ಹಾಗೂ ವಿವಿಧ ಸಾಮೂಹಿಕ ಭಜನಗೋಷ್ಠಿಗಳ ತರುವಾಯ ಆರಂಭವಾಯಿತು. ಅನ್ನಮಾಚಾರ್ಯ ಕೃತಿಗಳನ್ನು ಶ್ರೀ ಪಿ. ಎಸ್. ರಂಗನಾಥ್, ಶ್ರೀ ನಾಗೇಶ್ವರ ನಾಯುಡು ಹಾಗೂ ಶ್ರೀಮತಿ ಜಾನಕೀರಮಣ ಅವರುಗಳು ಹಾಡಿ ಸಭಿಕರನ್ನು ಭಕ್ತಿಯಲ್ಲಿ ತೇಲಾಡಿಸಿದರು.

ಧಾರ್ಮಿಕ ಉಪನ್ಯಾಸದ ಕಾರ್ಯಕ್ರಮದಲ್ಲಿ ಮೊದಲಿಗೆ ಮಾತನಾಡಿದವರು ಮಾತೃಶ್ರೀ ಚಿಂತಲ ಯೋಗಿನಿಮಾತೆಯವರು. ಅವರು ತಮ್ಮ ಉಪನ್ಯಾಸದಲ್ಲಿ ರಾಮದಾಸ, ಅನ್ನಮಯ್ಯ ತುಲಸೀದಾಸರನ್ನು ಉದಾಹರಿಸುತ್ತ ಮಾನವ ನಿಷ್ಕಾಮ ಭಕ್ತಿಯನ್ನು ಹೊಂದಿ ಮುನ್ನಡೆಯಬೇಕೆಂದರು.

ಶ್ರೀ ಗಾಗಿಲ್ಲಪುರದ ಶ್ರೀ ಶ್ರೀ ದಯಾನಂದ ಸ್ವಾಮಿಯವರು ಮಾತನಾಡುತ್ತ ದೇವರನ್ನು ನೆನೆಯುವ ದಿನವೇ ಪರಮೋತ್ಕೃಷ್ಟದಿನವೆಂದೂ ದೈವವನ್ನು ಪ್ರತಿದಿನವೂ ನೆನೆಯುವುದರಿಂದ ಬಾಳನ್ನು ಪರಮೋತ್ಕೃಷ್ಟ ಮಾಡಿಕೊಳ್ಳಬೇಕೆಂದೂ ಕರೆ ನೀಡಿದರು. ತೆನಾಲಿಯ ಶ್ರೀಶ್ರೀ ನಿರ್ಮಲಾನಂದಸ್ವಾಮಿಯವರು ಮಾತನಾಡುತ್ತ ಸನಾತನಧರ್ಮವು ಶ್ರೇಷ್ಠತಮವೆಂಬು

ದನ್ನು ನೆನಪಿಗೆ ತಂದು ಕೊಟ್ಟರು. ಶ್ರೀ ಶ್ರೀ ಪ್ರಸನ್ನಾನಂದ ಸ್ವಾಮಿಗಳು ಸನಾತನ ಧರ್ಮ ಮಾತ್ರವೇ 'ಸರ್ವೇಜನಾಃ ಸುಖಿನೋಭವಂತು' ಎಂಬ ಸಿದ್ಧಾಂತವನ್ನು ಒಪ್ಪುವುದೆಂದು ನುಡಿಯುತ್ತ ಇದರಲ್ಲಿನ ಸರ್ವಜೀವ ಸಮಭಾವವನ್ನು ವಿವರಿಸಿದರು. ಶ್ರೀ ಶ್ರೀ ಭೂಮಾನಂದಸ್ವಾಮಿ ಅವರು ಕಲಿಯುಗದಲ್ಲಿ ಭಕ್ತಿಯೊಂದೇ ಮೋಕ್ಷೋಪಾಯವೆಂಬುದನ್ನು ತಿಳಿಸಿದರು.

ತಿ. ತಿ. ದೇ. ಬೋರ್ಡ್ ಸದಸ್ಯೆ ಶ್ರೀಮತಿ ನನ್ನಪನೇನಿ ರಾಜಕುಮಾರಿ ಅವರು ಮಾತನಾಡುತ್ತ ಯಾತ್ರಿಕೋಪಯೋಗಿ, ಮಾನವಪ್ರೋಷಯೋಗಿ ಕಾರ್ಯಗಳಲ್ಲಿ ತಿ. ತಿ. ದೇ ತೊಡಗಿರುವುದನ್ನು ವಿವರಿಸಿ, ಸ್ತ್ರೀಯರು ರಾಮಾಯಣ, ಮಹಾಭಾರತ, ಭಾಗವತಗಳಿಂದ ಕಲಿಯ ಬೇಕಾದದ್ದು ಬಹಳವಿದೆಯೆಂದು ತಿಳಿಸಿದರು.

ಡಾ॥ ಕೊಂಡವೀಟಿ ವೆಂಕಟಕವಿಯವರು ಮಾತನಾಡಿ ಕಾಲಾನುಗುಣವಾಗಿ ಬದಲಾಯಿಸುವ ಧರ್ಮದ ಅರ್ಥವಂತಿಕೆಯನ್ನು ತಿಳಿದು ಆಚರಿಸುವುದರಲ್ಲಿ ಅಭಿವೃದ್ಧಿಯಿದೆಯೆಂದರು. ಶ್ರೀ ಮಧುನಾಪಂತಲ ಸತ್ಯನಾರಾಯಣಶಾಸ್ತ್ರಿಯವರು ಮಾತನಾಡುತ್ತ ದೈವದ ಹೆಸರನ್ನು ಹೇಳುವುದರಿಂದ ಒಳ್ಳೆಯ ಫಲ ಸಿಗುವುದೆಂದೂ ಅದಕ್ಕೆ ಹಾಗೆ ಮಾಡಲು ಯಾರಿಗೂ ಏನೂ ವೆಚ್ಚವಾಗದೆಂದೂ ತಿಳಿಸಿದರು. ಶ್ರೀ ನಾರಲ ರಾಮರೆಡ್ಡಿಯವರು ಏಕಾಗ್ರತೆಯೇ ನಮ್ಮ ಎಲ್ಲ ಕಾರ್ಯಗಳಲ್ಲೂ ಪ್ರಮುಖ ಪಾತ್ರವಹಿಸುವುದೆಂದರು. ಕೊನೆಯಲ್ಲಿ ಶ್ರೀ ವೆಂಗಲ ಪಟ್ಟಾಭಿ ಭಾಗವತರ್ ಅವರು 'ಶ್ರೀನಿವಾಸ ಕಲ್ಯಾಣ' ಹರಿಕಥೆಯನ್ನು ರಸಿಕ ಜನ ರಂಜಕವಾಗುವಂತೆ ಮಾಡಿದರು.

24–4–84ರ ಕಾರ್ಯಕ್ರಮವು ಶ್ರೀಕಪಿಲೇಶ್ವರಸ್ವಾಮಿ ಹಾಗೂ ಶ್ರೀ ಕಾಮಾಕ್ಷಿಅಮ್ಮನವರ ಉತ್ಸವ ವಿಗ್ರಹಗಳ ಮೆರವಣಿಗೆಯು ಯಾಗಶಾಲೆಗೆ ಬರುವುದರ ಮೂಲಕ ಆರಂಭವಾಯಿತು. ಅಂದು ಮಹಾರುದ್ರಹೋಮ ನಡೆಯಿತು.

ಗೀತಾ ಪಾರಾಯಣದ ನಂತರ ಶ್ರೀ ಎಂ. ಎಸ್. ರಾಮರಾಯರ ಸುಂದರಕಾಂಡ ಪ್ರವಚನ ನಡೆಯಿತು. ರಾಜಮಹೇಂದ್ರಿಯ ಸಾಧುಸ್ತ್ರೀ ಮಠದ ಮಾತಾ ದಯಾಬಾಯಮ್ಮ ಅವರ ಪ್ರಾರ್ಥನೆ ನಡೆಯಿತು.

ಧರ್ಮವು ದೈವದ ಪ್ರತೀಕವಾದದ್ದರಿಂದ ಧರ್ಮವನ್ನು ಅನುಸರಿಸ ಬೇಕೆಂದರು – ಕೈಲಾಸಕೋನದ ಶ್ರೀ ಶ್ರೀ ಜ್ಞಾನಾನಂದ ಸ್ವಾಮಿಗಳು; ವೀರಭದ್ರಾಪುರದ ಸಾಧುಸ್ತ್ರೀ ಮಠದ ಸ್ವಾಮಿನಿ ಶಾಂತಿ ಬಾಯಮ್ಮ ಅವರು ದೈನಂದಿನ ಜೀವದಲ್ಲಿ ಭಗವದ್ಗೀತಾಪಾರಾಯಣದ ಅಗತ್ಯವನ್ನು ವಿವರಿಸಿದರು.

ಡಾ॥ ಕರುಣಶ್ರೀ–ಜಂದ್ಯಾಲ ಪಾಪಯ್ಯಶಾಸ್ತ್ರಿಯವರು ಕಾವ್ಯದಲ್ಲಿ ಭಕ್ತಿ ಎಂಬ ಅಂಶದ ಬಗ್ಗೆ ಮಾತನಾಡುತ್ತ 'ಕವಿ ಸತ್ಯವನ್ನು ಹಿತವಾಗುವಂತೆ ಹೇಳಬಲ್ಲ'ನೆಂದು ತಿಳಿಸುತ್ತ ಲೀಲಾಶುಕ, ಪೋತನ, ತುಲಸೀದಾಸ, ಪುರಂದರದಾಸ ಮೊದಲಾದ ಕವಿಗಳಿಂದ ಉದಾಹರಣೆಗಳನ್ನು ನೀಡಿದರು.

ಡಾ॥ ಮರುಪೂರು ಕೋದಂಡರಾಮರೆಡ್ಡಿಯವರು ಶ್ರೀರಾಮಮಂದಿರವಿಲ್ಲದ ಊರೂ, ಶ್ರೀರಾಮನನ್ನು ಹೊಗಳದ ಕವಿಯೂ, ತೆಲುಗಿನಲ್ಲಿಲ್ಲ ವೆನ್ನುತ್ತ ಭಕ್ತಿಯನ್ನು ಈ ರೀತಿಯಾಗಿ ಹಿಂದಿನವರು ಹರಡಿದರೆಂದರು.

ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ವಂದನಾರ್ಪಣೆ ಮಾಡಿದರು.

ಸಂಜೆಯ ಕಾರ್ಯಕ್ರಮಗಳು ವಿವಿಧ ಭಜನ ಗೋಷ್ಠಿಗಳಿಂದ ಆರಂಭವಾಯಿತು. ತಿರುಪತಿಯ ಶ್ರೀ ಉಮಾಪತಿ, ಸಿನಿಗಾಯಕಿ ಶ್ರೀಮತಿ ರತ್ನಕುಮಾರಿ, ಶ್ರೀ ಆನಂದ ಹಾಗೂ ವೃಂದದವರು ಕೀರ್ತನೆಗಳನ್ನು ಹಾಡಿದರು.

ಶ್ರೀ ಮುದಿವರ್ತಿ ಕೊಂಡಮಾಚಾರ್ಯರ ನೇತೃತ್ವದಲ್ಲಿ ಎಸ್. ವಿ. ಬಾಲಮಂದಿರದ ವಿದ್ಯಾರ್ಥಿಗಳು ಭಗವದ್ಗೀತೆಯ 15 ನೇ ಅಧ್ಯಾಯವನ್ನು ಪಾರಾಯಣ ಮಾಡಿದರು.

ತಿ. ತಿ. ದೇ. ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ ಅವರು ಸ್ವರ್ಣೋತ್ಸವಗಳಲ್ಲಿನ ಹೂವಿನ ಅಲಂಕಾರ ಸ್ಪರ್ಧೆಯಲ್ಲಿ ವಿಜೇತರಾದವರ ಹೆಸರುಗಳನ್ನು ತಿಳಿಸಿದರು. ಶ್ರೀಮತಿ ಕುಮಾರಸ್ವಾಮಿರೆಡ್ಡಿಯವರು ವಿಜೇತರಿಗೆ ಬಹುಮಾನ ವಿತರಣೆ ಮಾಡಿದರು.

ಕಂಚಿ ಕಾಮಕೋಟಿ ಪೀಠಾಧಿಪತಿಗಳ ಆಶೀರ್ವಚನವನ್ನು ಅವರ ಪ್ರತಿನಿಧಿಗಳು ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಪಿ. ಕೆ. ಡಿ. ವಿ ಸತ್ಯನಾರಾಯಣ ರಾಜು ಹಾಗೂ ಕಾರ್ಯನಿರ್ವಹಣಾಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ ಯವರುಗಳಿಗೆ ನೀಡಿದರು.

ಶ್ರೀ ಜಿ ಕುಮಾರಸ್ವಾಮಿರೆಡ್ಡಿ ಯವರು ಸ್ವರ್ಣೋತ್ಸವಗಳನ್ನು ಆಂಧ್ರಪ್ರದೇಶದ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಹಾಗೂ ದೇಶದ ಮುಖ್ಯ ನಗರಗಳಲ್ಲಿ ಪ್ರತಿಸ್ಥಳದಲ್ಲೂ ಮೂರುದಿನಗಳ ಉತ್ಸವಗಳಂತೆ ಆಚರಿಸಲಾಗುವುದೆಂದು ತಿಳಿಸಿ, ತಿ. ತಿ. ದೇ. ಸ್ವರ್ಣೋತ್ಸವ ಸಂಚಿಕೆಯ ಉತ್ಪಾದನಾ ವೆಚ್ಚ ಪ್ರತಿಪ್ರತಿಗೆ 100 ರೂ ಆಗುವುದೆಂದೂ, ಅದನ್ನು ಪ್ರತಿಯೊಂದಕ್ಕೆ ರೂ 25–00 ರಂತೆ ಮಾರಾಟ ಮಾಡಲಾಗುವುದೆಂದೂ ತಿಳಿಸಿದರು. ತಿ. ತಿ. ದೇ. ಗಳ ಹಿಂದೂ ಧರ್ಮರಕ್ಷಣ ಸಂಸ್ಥೆ ನಿರ್ವಹಿಸುತ್ತಿರುವ ಪುರಾಣಪ್ರಬೋಧ ಪರೀಕ್ಷೆಗಳಲ್ಲಿ ಅತಿ ಹೆಚ್ಚಿನ ಅಂಕಗಳನ್ನು ಪಡೆದ ಹೈಸ್ಕೂಲು ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಪೂರ್ಣ ವೆಚ್ಚವನ್ನು ತಿ. ತಿ. ದೇ. ಇನ್ನು ಮುಂದೆ ಭರಿಸುವುದೆಂದು ತಿಳಿಸಿದರು.

ಏರ್ಪೇಡ್‌ನ ಶ್ರೀ ಶ್ರೀ ವಿದ್ಯಾನಂದಗಿರಿ ಸ್ವಾಮಿಯವರು ಮಾತನಾಡುತ್ತ ಗುರುಸೇವೆಯ ಮೂಲಕ ಅತ್ಯುಚ್ಚ ಜ್ಞಾನವನ್ನು ಪಡೆಯ ಬಹುದೆಂದು ತಿಳಿಸಿದರು.

ಕಾಳಹಸ್ತಿಯ ಶ್ರೀ ಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಗಳು ಮಾತನಾಡುತ್ತ 'ಕೋಪವೆಂಬುದನರ್ಥ ಸಾಧನ'ವೆಂದು ತಿಳಿಸಿ ಅದನ್ನು ಬಿಡಲು ಕರೆ ನೀಡಿದರು.

ಡಾ॥ ದಿವಾಕರ್ಲ ವೆಂಕಟಾವಧಾನಿಯವರು ಮಾತನಾಡುತ್ತ ಭಕ್ತಿಯ ಪಂಚ ಭಾವಗಳನ್ನೂ ದಾಸ್ಯಭಾವದ ಸೌಲಭ್ಯವನ್ನೂ ವಿವರಿಸಿದರು.

ಡಾ॥ ಬಿರುದು ರಾಮರಾಜು ಅವರು 'ಧರ್ಮವು ತನ್ನನ್ನು ರಕ್ಷಿಸಿದವರನ್ನು ಕಾಪಾಡುತ್ತದೆ' ಎಂಬುದನ್ನು ವಿವರಿಸಿ, ಹಿಂದೂ ಧರ್ಮ ಪ್ರಸಾರದಲ್ಲಿ ತಿ. ತಿ. ದೇ. ತನ್ನ ಹೆಚ್ಚಿನ ಶಕ್ತಿಯನ್ನು ವಿನಿಯೋಗಿಸಬೇಕೆಂದು ಕರೆ ನೀಡಿದರು.

ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಯವರು ಭಕ್ತಿ ಪೂರ್ಣ ಧರ್ಮವೇ ಮಾನವನ ಅಂತಿಮ ಲಕ್ಷ್ಯವಾಗಬೇಕೆಂದರು.

ಮೂರು ದಿನಗಳ ಉತ್ಸವಗಳ ಬಗ್ಗೆ ವಂದನೆಗಳನ್ನು ತಿಳಿಸುತ್ತ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿಯವರು, ಇದರಲ್ಲಿ ಭಾಗವಹಿಸಿದ ವಿದ್ವಾಂಸರು, ರಕ್ಷಕ ಪಡೆ, ಅಗ್ನಿಶಾಮಕ ದಳ, ವಿಶ್ವವಿದ್ಯಾನಿಲಯದ ಅಧಿಕಾರಿಗಳು, ಸ್ವಯಂಸೇವಕರು ಆಂ. ಪ್ರ. ರ ಸಾ. ಸಂಸ್ಥೆ, ತಿ. ತಿ. ದೇ. ಉದ್ಯೋಗಿಗಳ ಸಹಕಾರವನ್ನು ಅಭಿನಂದಿಸಿದರು.

ಶ್ರೀ ದೂಸಿಬ್ಯಾನರ್ಜಿ ಭಾಗವತರ್ ಅವರ ಕಥೆ ಪಾರ್ವತೀ ಕಲ್ಯಾಣದಿಂದ ಸ್ವರ್ಣೋತ್ಸವಗಳು ತಿರುಪತಿಯಲ್ಲಿ ಮುಕ್ತಾಯ ಹೊಂದಿದವು.

(ತತ್ಸಂಬಂಧಿ ಚಿತ್ರಗಳನ್ನು ರಕ್ಷಾಪತ್ರಗಳಲ್ಲಿ ಕಾಣಬಹುದಾಗಿದೆ. ಮುಂದಿನ ಸಂಚಿಕೆಯಲ್ಲಿ ಸ್ವರ್ಣೋತ್ಸವದ ಹಲವಾರು ಚಿತ್ರಗಳೊಡನೆ ಹಲವು ಹನ್ನೊಂದು ರಸ ಪ್ರಸಂಗಗಳನ್ನೂ ಸಾದರ ಪಡಿಸಲಾಗುತ್ತದೆ. – ಸಂ॥) ★

1984

# ಜೂನ್ ತಿಂಗಳಿನ ಮುಖ್ಯದಿನಗಳು

| | | |
|---|---|---|
| 2. | ಶನಿವಾರ | ನಮ್ಮಾಳ್ವಾರ್ ಉತ್ಸವಾರಂಭ. |
| 4. | ಸೋಮವಾರ | ತಿರುಪತಿ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ. |
| 8. | ಶುಕ್ರವಾರ | „ „ ಗರುಡೋತ್ಸವ. |
| 9. | ಶನಿವಾರ | ಶ್ರೀ ಪದ್ಮಾವತಿ ಅಮ್ಮನವ ತೆಪ್ಪೋತ್ಸವಾರಂಭ. |
| 11. | ಸೋಮವಾರ | ತಿರುಪತಿ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ರಥೋತ್ಸವ. |
| 12. | ಮಂಗಳವಾರ | „ „ ಧ್ವಜಾವರೋಹಣ. |
| 13. | ಬುಧವಾರ | ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ ಸಮಾಪ್ತಿ. |
| 20. | ಬುಧವಾರ | ತಿರುಚಾನೂರು ಸುಂದರರಾಜಸ್ವಾಮಿ ಅವತಾರೋತ್ಸವಾರಂಭ. |
| 22. | ಶುಕ್ರವಾರ | „ „ ಅವತಾರೋತ್ಸವ ಸಮಾಪ್ತಿ. |
| 28. | ಗುರುವಾರ | ಪೆರಿಯಾಳ್ವಾರ್ ಉತ್ಸವಾರಂಭ. |





# ಹೊಸ ಶೀರ್ಷಿಕೆ

ಸಪ್ತಗಿರಿ ಮಾಸಪತ್ರಿಕೆಯಲ್ಲಿ ಜೂನ್ 1984 ರಿಂದ ತಿರುಮಲೆ ತಿರುಪತಿ ದೇವಸ್ಥಾನಗಳ ಧಾರ್ಮಿಕ ಕೃತಿಗಳನ್ನು ಪರಿಚಯಿಸಿ ಕೊಡುವ ಹೊಸ ಶೀರ್ಷಿಕೆಯನ್ನು ಆರಂಭಿಸಲಾಗುವುದು.

## "ಗ್ರಂಥಾಂತರಂಗ"

— ಈ ಶೀರ್ಷಿಕೆಯಡಿಯಲ್ಲಿ ಪ್ರತಿ ತಿಂಗಳೂ ತಿರುಮಲೆ ತಿರುಪತಿ ದೇವಸ್ಥಾನಗಳ ಪ್ರಕಟನಶಾಖೆಯ ಒಂದೊಂದು ಪುಸ್ತಕವನ್ನು ಪರಿಚಯ ಮಾಡಿಕೊಡುವುದರ ಮೂಲಕ, ಆಸಕ್ತ ಓದುಗರಿಗೆ ಹೊಸ ಪುಸ್ತಕಗಳ ಬಗ್ಗೆ ಮಾಹಿತಿ ನೀಡಲು ಅನುಕೂಲವಾಗುವುದೆಂಬ ಅನೇಕ ಓದುಗರ ಅಭಿಪ್ರಾಯ ಕಾರ್ಯರೂಪಕ್ಕೆ ಬರುವುದೆಂದು ತಿಳಿಸಲು ಹರ್ಷಿಸುತ್ತೇವೆ.

ನಿರೀಕ್ಷಿಸಿ

**"ಗ್ರಂಥಾಂತರಂಗ"**

**1984** ಜೂನ್ ತಿಂಗಳಿನಿಂದ

— ಸಂಪಾದಕರು


Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy Manager T. T. D. Press Tirupati - 517 501

Regd. No. H/TRP 14

వార్షిక చందా రూ 12-00













